# ಚದುರಂಗ ಅವರ ವೈಶಾಖ ಕಾದಂಬರಿ

(ಎಂ.ಫಿಲ್. ಅಧ್ಯಯನಕ್ಕಾಗಿ ಸಲ್ಲಿಸಲಾಗುತ್ತಿರುವ ಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ)



ಸಂಶೋಧಕರು
ಕೆ. ಪಣ್ಣ ಕೊಟ್ರಮ್ಮ

ಮಾರ್ಗದರ್ಶಕರು
ಡಾ. ಮಲ್ಲಿಕಾರ್ಜುನ ವಣೇನೂರು
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯಾಧ್ಯಯನ ವಿಭಾಗ





ಕನ್ನಡ ಸಾಹಿತ್ಯಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೩

# ಚದುರಂಗ ಅವರ ವೈಶಾಖ ಕಾದಂಬರಿ

ಎಂ.ಫಿಲ್. ಅಧ್ಯಯನಕ್ಕಾಗಿ ಸಲ್ಲಿಸಲಾಗುತ್ತಿರುವ ನಿಬಂಧ

**ಸಂಶೋಧಕರು**

ಕೆ. ಸಣ್ಣ ಕೊಟ್ರಮ್ಮ

**ಮಾರ್ಗದರ್ಶಕರು**

ಡಾ. ಮಲ್ಲಿಕಾರ್ಜುನ ವಣೇನೂರು

ಸಹಾಯಕ ಪ್ರಾಧ್ಯಾಪಕರು

ಕನ್ನಡ ಸಾಹಿತ್ಯಾಧ್ಯಯನ ವಿಭಾಗ




ಕನ್ನಡ ಸಾಹಿತ್ಯಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

# ಪ್ರಮಾಣ ಪತ್ರ

ಕನ್ನಡ ಎಂ.ಫಿಲ್. ಪದವಿಯ ಅಧ್ಯಯನದ ಅಂಗವಾಗಿ ಐದನೆಯ ಪತ್ರಿಕೆಗಾಗಿ ***ಚದುರಂಗ ಅವರ ವೈಶಾಖ ಕಾದಂಬರಿ*** ಎಂಬ ವಿಷಯದ ಕುರಿತು ಕನ್ನಡ ಸಾಹಿತ್ಯಾಧ್ಯಯನ ವಿಭಾಗದಲ್ಲಿ ಡಾ. ಮಲ್ಲಿಕಾರ್ಜುನ ವಣೆನೂರು ಅವರ ಮಾರ್ಗದರ್ಶನದಲ್ಲಿ ಪ್ರಸ್ತುತ ನಿಬಂಧವನ್ನು ಸಿದ್ಧ ಪಡಿಸಿರುತ್ತೇನೆ. ಈ ನಿಬಂಧವನ್ನು ಬೇರೆ ಯಾವುದೇ ಪದವಿಗಾಗಲಿ, ವಿಶ್ವವಿದ್ಯಾಲಯಕ್ಕಾಗಲಿ ಬಳಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

K. S. Kottramma

**(ಕೆ. ಸಣ್ಣ ಕೊಟ್ರಮ್ಮ)**

ದಿನಾಂಕ

ಸ್ಥಳ : ವಿದ್ಯಾರಣ್ಯ

## ದೃಢೀಕರಣ ಪತ್ರ

ಕನ್ನಡ ಎಂ.ಫಿಲ್. ಪದವಿಯ ಅಧ್ಯಯನದ ಅಂಗವಾಗಿ ಐದನೆಯ ಪತ್ರಿಕೆಗಾಗಿ ***ಚದುರಂಗ ಅವರ ವೈಶಾಖ ಕಾದಂಬರಿ*** ಎಂಬ ವಿಷಯದ ಕುರಿತು ಕನ್ನಡ ಸಾಹಿತ್ಯಾಧ್ಯಯನ ವಿಭಾಗದಲ್ಲಿ ನನ್ನ ಮಾರ್ಗದರ್ಶನದಲ್ಲಿ ಪ್ರಸ್ತುತ ನಿಬಂಧವನ್ನು ಸಿದ್ಧ ಪಡಿಸಿರುತ್ತಾರೆ. ಈ ನಿಬಂಧವನ್ನು ಬೇರೆ ಯಾವುದೇ ಪದವಿಗಾಗಲಿ, ವಿಶ್ವವಿದ್ಯಾಲಯಕ್ಕಾಗಲಿ ಬಳಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತೇನೆ.

ದಿನಾಂಕ

**(ಡಾ. ಮಲ್ಲಿಕಾರ್ಜುನ ವಣೆನೂರು)**

**ಸ್ಥಳ : ವಿದ್ಯಾರಣ್ಯ**

# ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಕಾದಂಬರಿ ಲೋಕದಲ್ಲಿ ವೈಶಾಖ ಕಾದಂಬರಿಯು ಅತ್ಯಂತ ಮಹತ್ವಪೂರ್ಣವಾದ ಕೃತಿಯಾಗಿದೆ. ಈ ಕೃತಿ ಪ್ರಕಟವಾಗಿ ಸುಮಾರು ೩೧ ವರ್ಷಗಳಾಗಿವೆ. ಆದಾಗ್ಯೂ ಈ ಕೃತಿಯ ಮಹತ್ವ ಕಿಂಚಿತ್ತೂ ಕಡಿಮೆಯಾಗಿಲ್ಲ. ಹಲವು ಕಾರಣಗಳಿಗಾಗಿ ಅದರಲ್ಲೂ ವಸ್ತು, ತಂತ್ರ, ಮತ್ತು ಬಳಸಿದ ಭಾಷೆಯಿಂದಾಗಿ ಈ ಕೃತಿ ವಿಶಿಷ್ಟವೆನಿಸಿದೆ. ಅಲ್ಲದೆ ಪ್ರಯೋಗಾತ್ಮಕವಾಗಿಯೂ ಕನ್ನಡ ಕಾದಂಬರಿ ಪರಂಪರೆಯಲ್ಲಿ ಇದು ಹೊಸತನವನ್ನು ಪ್ರಕಟಪಡಿಸಿರುವುದೂ ಸಹ ಈ ಕೃತಿ ಹೆಗ್ಗಳಿಕೆಯೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಈ ಕೃತಿ ಪ್ರಕಟಗೊಂಡು ಮೂರು ದಶಕಗಳ ನಂತರದಲ್ಲೂ ಇದರ ಮಹತ್ವವನ್ನು ತಿಳಿಯುವ ಅಧ್ಯಯನಕ್ಕೊಳಪಡಿಸುವ ಉದ್ದೇಶ ಪ್ರಸ್ತುತ ಎಂ.ಫಿಲ್. ಅಧ್ಯಯನದ ಹಿಂದಿದೆ.

ವೈಶಾಖದ ಪ್ರಧಾನ ವಸ್ತು ಅವಸಾನ ಹೊಂದುತ್ತಿರುವ ಗ್ರಾಮೀಣ ಜಗತ್ತಿನ ಕುರಿತಾಗಿದೆ. ಈ ಕಾದಂಬರಿಯಲ್ಲಿ ಬರುವ ಆ ಅವಸಾನದ ಊರು ದರುಮನ ಹಳ್ಳಿಯಾಗಿದೆ. ಈ ಕೃತಿಯ ಕೇಂದ್ರ ಪ್ರಧಾನವಾಗಿ ದರುಮನಹಳ್ಳಿಯಾಗಿದೆ. ಈ ದರುಮನಹಳ್ಳಿಯು ಮೈಸೂರು ಭಾಗದ ಗ್ರಾಮೀಣ ಪ್ರದೇಶವಾಗಿದೆ. ಅಂತೆಯೇ ವೈಶಾಖ ಕಾದಂಬರಿಯು ಈ ಭಾಗದ ಆಡುನುಡಿಯನ್ನು ಒಳಗೊಂಡಂತೆ ಶಿಷ್ಟ ಭಾಷೆಯನ್ನೂ ಒಳಗೊಂಡಿದೆ. ಕಾದಂಬರಿಯಲ್ಲಿ ಮಾಡಲಾದ ಈ ಭಾಷಿಕ ಪ್ರಯೋಗವು ಕಾದಂಬರಿಯ ತಂತ್ರ ಮತ್ತು ನಿರೂಪಣೆಗೆ ಹೊಸತನವನ್ನು ನೀಡಿದೆ. ಹೊಸ ಲವಲವಿಕೆಯನ್ನು ಉಂಟುಮಾಡಿದೆ. ಹಲವು ವಿಮರ್ಶಕರು ಈ ಬಗೆಯ ಭಾಷಿಕ ಪ್ರಯೋಗವನ್ನು ವಿಮರ್ಶಿಸಿರುವುದೂ ಇದೆ. ಕಾದಂಬರಿಯಲ್ಲಿ ಹಲವೊಂದು ಪ್ರಸಂಗಗಳಲ್ಲಿ ಈ ಭಾಷಾ ಪ್ರಯೋಗವು ಸಹಜವಾಗಿಲ್ಲವೆಂಬುದು ಈ ವಿಮರ್ಶಕರ ಅನಿಸಿಕೆಯಾಗಿದೆ. ಹಲವು ಕಡೆ ಇದು ಸಹಜವಾಗಿಲ್ಲದಿದ್ದಾಗ್ಯೂ ಕೆಳವರ್ಗದ ಪಾತ್ರಗಳು ತಮ್ಮ ಭಾಷೆಯಲ್ಲೇ ಮಾತನಾಡುವುದು ಕೃತಿಗೆ ಹೊಸತವನ್ನು ನೀಡಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಇದೇ ಬಗೆಯ ಅಭಿಪ್ರಾಯವನ್ನು ವಿಮರ್ಶಕರಾದ ಡಾ. ಕೆ. ವಿ. ನಾರಾಯಣ ಅವರು ಅತ್ಯಂತ ಅರ್ಥಪೂರ್ಣವಾಗಿ ಈ ಕೆಳಗಿನಂತೆ ವಿವರಿಸಿದ್ದಾರೆ.

"ಚದುರಂಗರನ್ನು ಪ್ರಗತಿಶೀಲ ಲೇಖಕರೆಂದು ಪರಿಗಣಿಸುವ ವಾಡಿಕೆಯು ವಿಮರ್ಶಕರಲ್ಲಿದೆ. ಅವರ ಕಥೆಗಳು ಈ ಪರಿಗಣನೆಗೆ ತಕ್ಕ ಸಮರ್ಥನೆಯನ್ನು ಒದಗಿಸುವಂತಿವೆ. ಆದರೆ ಪ್ರಗತಿಶೀಲ ಲಕ್ಷಣಗಳು

ಅವರ ಕಥಾ ಸಾಹಿತ್ಯದ ಒಂದು ಸಂಚಾರಿ ಸ್ಥಿತಿ ಮಾತ್ರ. ಕಥನ ಕಲೆಯ ದೃಷ್ಟಿಯಿಂದ, ಅವರೇ ತಮ್ಮ ಸಂದರ್ಶನವೊಂದರಲ್ಲಿ ಈಚೆಗೆ ಹೇಳಿದಂತೆ, ಅವರು ಮಾಸ್ತಿಯವರ ಪರಂಪರೆಗೆ ಸೇರಿದವರು. ಕನ್ನಡ ನವೋದಯದಲ್ಲಿ ಮೊದಲಾಗಿ ಪ್ರಗತಿಶೀಲ, ನವ್ಯ ಚಳವಳಿಗಳ ಪ್ರತಿಕ್ರಿಯೆಯನ್ನು ಎದುರಿಸಿಯೂ ತನ್ನೆಲ್ಲಾ ಸತ್ವವು ತೀರದಂತೆ ಆವಿಷ್ಕಾರಗಳನ್ನು ಪಡೆಯುತ್ತಿರುವ ಈ ಕಥನ ಕಲೆಯು ಸಹಜವಾಗಿಯೇ ಚದುರಂಗರಲ್ಲಿ ಒಬ್ಬ ಪ್ರಯೋಗಪಟುವನ್ನು ಪಡೆದಿದೆ. ಯುಕ್ತ ವಿನ್ಯಾಸಗಳನ್ನು ಕಂಡುಕೊಂಡಿದೆ. ಬಂಡಾಯ ಮತ್ತು ದಲಿತ ಸಾಹಿತ್ಯಗಳ ಕಥನ ಸಾಧ್ಯತೆಗಳೂ ಕೂಡ ಇದೇ ಪೂರ್ವ ಮಾದರಿಗಳ ಅನುಸರಣೆಯಾಗುತ್ತಿರುವ ಸನ್ನಿವೇಶದಲ್ಲಿ ಚದುರಂಗರ ವೈಶಾಖ ಈವತ್ತಿನ ಕಥಾ ಸಾಹಿತ್ಯದ ಮುಖ್ಯ ಲಕ್ಷಣಗಳನ್ನೂ, ಸಮಸ್ಯೆಗಳನ್ನೂ ಮೈಗೂಡಿಸಿಕೊಂಡಿದೆ (ಡಾ. ಕೆ. ವಿ. ನಾರಾಯಣ, ವೈಶಾಖ, ವೈಶಾಖದ ವೈವಿಧ್ಯ, ಪು. ೧೩.)

ಈ ಮೇಲಿನ ಡಾ. ಕೆ. ವಿ. ಎನ್. ಅವರ ವಿಶ್ಲೇಷಣೆಯು ಕನ್ನಡ ಕಥನ ಕಲೆಯ ಸಮಸ್ಯೆಗಳನ್ನು, ನವೋದಯದಿಂದ ದಲಿತ ಬಂಡಾಯದವರೆಗೂ ಎದುರಿಸಿದ ಅಭಿವ್ಯಕ್ತಿಯ ಹಲವು ಸಾಧ್ಯತೆಗಳನ್ನು ಸೂಚ್ಯವಾಗಿ ವಿವರಿಸುತ್ತದೆ. ಒಟ್ಟಾರೆ ಇಲ್ಲಿನ ಧ್ವನಿಯು ಕನ್ನಡ ಕಥನ ಕಲೆಯ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಚದುರಂಗ ಅವರು ವಿಸ್ತರಿಸಿದರು ಎಂಬುದಂತೂ ಸ್ಪಷ್ಟ. ಕನ್ನಡ ಕಾದಂಬರಿ ಜಗತ್ತಿನ ಹೊಸ ಸಾಧ್ಯತೆಗಳ ಕುರುಹುಗಳನ್ನು ಹೊಂದಿದ ಪ್ರಸ್ತುತ ಕಾದಂಬರಿಯ ಅಧ್ಯಯನ ಅತ್ಯಂತ ಮಹತ್ವ ಪೂರ್ಣವಾದದ್ದೆಂದು ಭಾವಿಸಲಾಗಿದೆ.

ಹೀಗಾಗಿ ಎಂ.ಫಿಲ್. ಅಧ್ಯಯನಕ್ಕಾಗಿ ವೈಶಾಖ ಕೃತಿಯನ್ನು ಆಯ್ದುಕೊಳ್ಳಲಾಗಿದೆ. ಈ ಕೃತಿಯು ಹೇಗೆ ವಸ್ತು ತಂತ್ರ ಸ್ವರೂಪ ಮತ್ತು ವಿನ್ಯಾಸಗಳಿಂದಾಗಿ ಕನ್ನಡ ಕಾದಂಬರಿ ಪರಂಪರೆಯಲ್ಲಿ ಭಿನ್ನವಾಗಿದೆಯೆಂಬುದನ್ನು ವಿಶ್ಲೇಷಿಸುವುದರ ಮೂಲಕ ವೈಶಾಖದ ವೈಶಿಷ್ಟ್ಯತೆಗಳನ್ನು ಅರಿಯಬಹುದಾಗಿದೆ. ಕಾದಂಬರಿಯು ನಿರೂಪಿಸುತ್ತಿರುವ ಗ್ರಾಮವೊಂದರ ಕಥನವು ಹೇಗೆ ಅಸಂಖ್ಯಾತ ವಿವರಗಳೊಂದಿಗೆ ಬೆಳೆಯುತ್ತಾ ಸಾಗುತ್ತದೆ ಎಂಬುದನ್ನು ಇಂಥದೇ ವಸ್ತುವುಳ್ಳ ಇನ್ನಿತರ ಕಾದಂಬರಿಗಳೊಂದಿಗೆ ತುಲನೆ ಮಾಡಬಹುದಾಗಿದೆ. ವಿಶೇಷವಾಗಿ ಕಾದಂಬರಿಯ ಹರವನ್ನು ಗಮನಿಸುವುದಾದರೆ ಮಲೆಗಳಲ್ಲಿ ಮದುಮಗಳು ಮತ್ತು ಗ್ರಾಮಾಯಣ ಕಾದಂಬರಿಗಳನ್ನು ನೆನಪಿಗೆ ತರುತ್ತದೆ ವೈಶಾಖ. ಇಂತಹ ಗ್ರಾಮ ಬದುಕಿನ ಚಿತ್ರಣವಿರುವ ಕಾದಂಬರಿಗಳ ಪರಂಪರೆಯಲ್ಲಿ ವೈಶಾಖ ಹೇಗೆ ಭಿನ್ನವಾಗಿ ನಿಲ್ಲುತ್ತದೆ ಎಂದು ಕಂಡು ಕೊಳ್ಳುವ ಪ್ರಯತ್ನ ಇಲ್ಲಿಯದಾಗಿದೆ.

**ವಸ್ತು**

ಪ್ರಧಾನವಾಗಿ ಕಾದಂಬರಿಯ ವಸ್ತು ಗ್ರಾಮೀಣ ಜಗತ್ತು. ಇಲ್ಲಿಯ ಗ್ರಾಮವು ಆಧುನಿಕ ಭಾರತದ ಸಂಕೀರ್ಣತೆಯುಳ್ಳ ಯಾವುದೇ ಹಳ್ಳಿಯನ್ನು ಪ್ರತಿನಿಧಿಸಬಲ್ಲದು. ಕಾದಂಬರಿಯಲ್ಲಿ ಸೂಚ್ಯವಾಗಿ ವ್ಯಕ್ತವಾಗಿರುವ ಕೆಲವೊಂದು ಸಂಗತಿಗಳ ಆಧಾರದಲ್ಲಿ ಹೇಳುವುದಾದರೆ ಕಥನದ ಕಾಲ ಭಾರತಕ್ಕೆ ಸ್ವಾತಂತ್ರ್ಯ ದೊರೆತ ಕಾಲಘಟ್ಟದ ಆಚೀಚೆ ಎನ್ನಬಹುದು. ಕಾದಂಬರಿಯ ವೃತ್ತಾಂತದಲ್ಲಿ

ಚಿತ್ರಣಗೊಂಡಿರುವ ಶಾನುಭೋಗರ, ಮತ್ತು ಪೊಲೀಸರ ಚಿತ್ರಣವನ್ನು ಗಮನಿಸಿದರೆ ಸ್ವಾತಂತ್ರ್ಯ ದೊರೆತ ಕಾಲಘಟ್ಟದ ಕಥನವೆಂದು ಹೇಳಲು ಅವಕಾಶವಿದೆ. ಹಾಗೆ ನೋಡಿದರೆ ಹತ್ತಿರದ ಕೆಲವೊಂದು ಹಳ್ಳಿಗಳನ್ನು ಹೊರೆತು ಪಡಿಸಿದರೆ ಇಡೀ ದರುಮನಹಳ್ಳಿಯೇ ಹೊರಜಗತ್ತಿನೊಂದಿಗೆ ಅಂತಹ ಸಂಪರ್ಕವೇನೂ ಇಲ್ಲದ ದ್ವೀಪದಂತಿದ್ದ ಹಳ್ಳಿಯೆಂದರೂ ತಪ್ಪಾಗಲಿಕ್ಕಿಲ್ಲ. ಗ್ರಾಮ ಭಾರತದ ಸಕಲ ವೈರುಧ್ಯಗಳನ್ನೆಲ್ಲಾ ಒಳಗೊಂಡು ಜಾತಿ, ವರ್ಣ, ವರ್ಗ ಸಂಘರ್ಷದಿಂದ ವಿನಾಶದ ಅಂಚಿಗೆ ತಲುಪಿದ ಗ್ರಾಮೀಣ ಭಾರತವನ್ನು ಸಾಂಕೇತಿಕವಾಗಿ ಚಿತ್ರಿಸುವುದರಿಂದಲೇ ಕಾದಂಬರಿಯು ಮಹತ್ವಪೂರ್ಣವಾದುದೆಂದು ಹೇಳಬಹುದಾಗಿದೆ.

ಡಾ. ಕೆ. ವಿ. ನಾರಾಯಣ ಅವರು ವಿವರಿಸುವಂತೆ "ಕನ್ನಡ ಕಾಂದಬರಿಗಳ ಬೆಳವಣಿಗೆಯನ್ನು ಗಮನಿಸಿದವರಿಗೆ ಈ ಕಾದಂಬರಿಯು ಕೆಲವು ಸಾಧ್ಯತೆಗಳನ್ನು ಕಾಣಲು ಸಾಧ್ಯವಾಗುವುದು. ವಸ್ತು ಮತ್ತು ಅದರ ನಿರ್ವಹಣೆ ಮತ್ತು ನಿರೂಪಣಾ ವಿಧಾನಗಳಲ್ಲಿ ಹೊಸತನ ಸಾಧಿಸಲು ಯತ್ನಿಸಲಾಗಿದೆ. ಸಾಮಾಜಿಕವಾಗಿ ಕೆಳಸ್ತರದಲ್ಲಿರುವ ಶೋಷಿತ ವ್ಯಕ್ತಿಯೊಬ್ಬನ ವಿಕಸನಶೀಲ ಪ್ರಜ್ಞೆಯ ಮೂಲಕ ನಾಳೆಗೆ ಸಿದ್ಧನಾಗುವ ಪ್ರಕ್ರಿಯೆಯನ್ನು ಬಿಂಬಿಸುವಲ್ಲಿ ಸಮಕಾಲೀನ ಈ ದಶಕದ ಪ್ರಮುಖ ಸಾಹಿತ್ಯಿಕ ಆಶಯವೊಂದನ್ನು ಕೃತಿ ಪಡೆದಂತಾಗಿದೆ. ಸಂಪ್ರದಾಯಿಕ ಅರ್ಥದಲ್ಲಿ ಬಂಧದಲ್ಲಿ ಸಾವಯವತೆ ಇಲ್ಲದಿದ್ದರೂ ಮಾನವ, ಪ್ರಾಣಿ ಮತ್ತು ಪ್ರಾಕೃತಿಕ ಜಗತ್ತುಗಳ ವಿವರಗಳ ಮಂಡನೆಯ ಕ್ರಮದಿಂದ, ಆಚರಣೆ, ನಂಬಿಕೆ, ಪುರಾಣಗಳ ಬಳಕೆಯಿಂದ ಬಂಧವೊಂದನ್ನು ಬೇರೊಂದು ನೆಲೆಯಲ್ಲಿ ಕೃತಿಗೆ ಒದಗಿಸಲಾಗಿದೆ. ಈ ಎಲ್ಲಾ ಅಂಶಗಳಿಂದ ವೈಶಾಖ ಕನ್ನಡ ಕಾದಂಬರಿಗಳಲ್ಲಿ ಮಹತ್ವದ ಸ್ಥಾನವೊಂದನ್ನು ಗಳಿಸಿಕೊಳ್ಳುವುದು ಶಕ್ಯವಾಗಿದೆ ಎನ್ನುತ್ತಾರೆ (ವೈಶಾಖ, ಡಾ. ಕೆ. ವಿ. ನಾರಾಯಣ, ವೈಶಾಖದ ವೈವಿಧ್ಯತೆಗಳು, ಸಂ. ಡಾ. ಬಸವರಾಜ ಸಬರದ). ಬಹುತೇಕ ಇದೇ ಅಭಿಪ್ರಾಯ ಬರುವಂತೆ ಹಲವು ವಿಮರ್ಶಕರು ಸಹ ಈ ಕೃತಿಯ ಕುರಿತಾಗಿ ಹೇಳಿರುವುದನ್ನು ಗಮನಿಸಬಹುದಾಗಿದೆ. ಇಂತಹ ಹೇಳಿಕೆಗಳ ಸಮರ್ಪಕತೆಯನ್ನು ವಿಶ್ಲೇಷಿಸುವ ನಿಟ್ಟಿನಲ್ಲಿಯೂ ಈ ಅಧ್ಯಯನ ಮುಖ್ಯವಾದುದೆಂದು ಭಾವಿಸಲಾಗಿದೆ. ಈ ಕೃತಿಯು ಕುರಿತಾಗಿ ಬಂದಿರುವ ವಿಮರ್ಶೆಗಳೊಂದಿಗೆ ಪ್ರಸ್ತುತ ಅಧ್ಯಯನವು ವಸ್ತುನಿಷ್ಠ ವಿಶ್ಲೇಷಣೆಯನ್ನು ಕೈಗೊಳ್ಳಲು ಬಯಸುತ್ತದೆ.

ಪ್ರಧಾನವಾಗಿ ಈ ಬಗೆಯ ವಸ್ತುಗಳನ್ನು ನಿಭಾಯಿಸಿದ ಇತರ ಕನ್ನಡ ಕಾದಂಬರಿಗಳ ಸಾಲಿನಲ್ಲಿ ವೈಶಾಖವನ್ನಿಟ್ಟು ನೋಡುವುದು ಅಷ್ಟೇ ಮುಖ್ಯವಾಗುತ್ತದೆ. ಒಟ್ಟು ಕಾದಂಬರಿಯ ಪರಂಪರೆಯಲ್ಲಿ ಈ ಕೃತಿಯು ಹೇಗೆ ಪ್ರಧಾವಾಗುತ್ತದೆ ಮತ್ತು ಚದುರಂಗರ ಇನ್ನಿತರ ಕಾದಂಬರಿಗಳೊಂದಿಗೆ ಇದು ಹೇಗೆ ಭಿನ್ನ ಎಂಬುದನ್ನೂ ಸಹ ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗುವುದು.

**ತಂತ್ರ**

ವೈಶಾಖವು ತಂತ್ರದ ದೃಷ್ಟಿಯಿಂದ ಕೂಡ ವಿಶಿಷ್ಟವಾದುದಾಗಿದೆ. ಇಲ್ಲಿ ಲಕ್ಕ ಪ್ರಧಾನ ಪಾತ್ರವೆಂದು ಎನಿಸಿದರೂ ಅವನನ್ನೇ ಪ್ರಧಾನ ಪಾತ್ರವೆಂದು ಹೇಳಲಾಗದು. ಹಾಗೆ ನೋಡಿದರೆ ಕಥನದ ಕೇಂದ್ರವಾಗಿರುವ

ದರುಮನಹಳ್ಳಿಯೇ ಪ್ರಧಾನ ಪಾತ್ರದಂತೆ ಗೋಚರಿಸುತ್ತದೆ. ದರುಮನಹಳ್ಳಿಯಲ್ಲಿರುವ ಜಾತಿಗಳು, ಅದಕ್ಕೆ ತಕ್ಕಂತೆ ಏಣಿಶ್ರೇಣಿ, ಧಾರ್ಮಿಕ ಕಂದಾಚಾರಗಳ ಬಂಧನಗಳು ಮತ್ತು ಈ ಬಂಧನಗಳನ್ನು ಮೀರಲು ಪ್ರಯತ್ನಿಸುತ್ತಿರುವ ವರ್ಣ ವ್ಯವಸ್ಥೆಯ ಎರಡು ಕೊನೆಯಲ್ಲಿರುವ ವ್ಯಕ್ತಿಗಳು ಎಂಬುದನ್ನು ಇಲ್ಲಿ ಗಮನಿಸಬಹುದು. ಅದೂ ಎರಡು ಕೊನೆಯಲ್ಲಿರುವ ವ್ಯಕ್ತಿಗಳು ಪರಸ್ಪರ ವಿರುದ್ಧ ಲಿಂಗಿಗಳಾಗಿರುವುದು. ಲಕ್ಕ ಸಮಾಜದ ಕೆಳಸ್ತರದ ಕೊನೆಯಲ್ಲಿದ್ದರೆ ರುಕ್ಮಿಣಿ ಬ್ರಾಹ್ಮಣ ಸಮಾಜವನ್ನು ಪ್ರತಿನಿಧಿಸುತ್ತಾಳೆ. ಈ ಎರಡು ಸ್ತರಗಳ ವ್ಯಕ್ತಿಗಳು ಸಾಂಪ್ರದಾಯಿಕ ಕಟ್ಟುಗಳನ್ನು ಮೀರಿ ಲೈಂಗಿಕ ನೆಲೆಯಲ್ಲಿ ಒಂದಾಗುತ್ತಾರೆ. ಅದೂ ಅಸಹಜ ಕ್ರಮವೊಂದರ ಮೂಲಕ. ಹಾಗೆ ನೋಡಿದರೆ ಇಲ್ಲಿ ಸಹಜ ಅಸಹಜ ಎಂದು ವಿಭೇದಿಸುವುದೂ ಸಹ ಕಷ್ಟಕರವಾದುದೇ ಆಗಿದೆ. ಒಂದೆಡೆ ರುಕ್ಮಿಣಿ ತಂದೆಯ ಸಮಾನರಾದ ಮಾವನವರಿಂದ ಲೈಂಗಿಕ ಆಕ್ರಮಣಕ್ಕೆ ಒಳಗಾಗುತ್ತಾಳೆ. ಆದರೂ ಅದನ್ನು ಪ್ರತಿಭಟಿಸುವುದಿಲ್ಲ. ಇನ್ನೊಂದೆಡೆ ಸ್ವತಃ ರುಕ್ಮಿಣಿಯೇ ಲಕ್ಕನ ಮೇಲೆ ಲೈಂಗಿಕ ಆಕ್ರಮಣಕ್ಕಿಳಿಯುತ್ತಾಳೆ. ಇಂತಹ ಸಂದರ್ಭಗಳಿರುವ ಘಟನೆಗಳು ಸಂಗತಿಗಳನ್ನು ಲೇಖಕರು ನಿರೂಪಿಸುವ ಬಗೆ ವಿಶಿಷ್ಟವಾದುದಾಗಿದೆ. ಇಡೀ ಕಾದಂಬರಿಯು ಗ್ರಾಮೀಣ ಜಗತ್ತಿನ ಸಮೃದ್ಧ ವಿವರಗಳೊಂದಿಗೆ, ಲೈಂಗಿಕ ಬದುಕಿನ ವೈರುಧ್ಯಗಳನ್ನು ಸಹ ಅಭಿವ್ಯಕ್ತಿಸಲು ಬಳಸುವ ತಂತ್ರ ಮತ್ತು ತಂತ್ರಗಾರಿಕೆಯು ಕುತೂಹಲಕಾರಿಯಾಗಿದೆ.

ಪ್ರಧಾನವಾಗಿ ಲಕ್ಕನ ಮೂಲಕ ವೈಶಾಖದ ಕಥನ ಬಿಚ್ಚಿಕೊಳ್ಳುತ್ತದೆ. ಹಾಗೆ ನೋಡಿದರೆ ಬಹುತೇಕ ಲಕ್ಕನೇ ಪ್ರಧಾನ ಪಾತ್ರ ಎನ್ನಿಸದೇ ಇರದು. ಆದಾಗ್ಯೂ ರುಕ್ಮಿಣಿ, ಕೃಷ್ಣಶಾಸ್ತ್ರಿಗಳು ಮುಂತಾದ ಕೆಲ ಪಾತ್ರಗಳು ತಂತಮ್ಮ ವೃತ್ತಾಂತಗಳನ್ನು ಬಿಚ್ಚಿಟ್ಟುಕೊಳ್ಳುವುದೂ ವಿಶಿಷ್ಟವಾದುದಾಗಿದೆ. ವಿಶೇಷ ಬಗೆಯ ತಂತ್ರಗಾರಿಕೆಯಿಂದ ಕೂಡಿದೆ. ಹಾಗೆಯೇ ವೈಶಾಖದಲ್ಲಿ ಬರುವ ಪ್ರಾಣಿ ಪಕ್ಷಿಗಳ ಸಂಗತಿಗಳೂ ಸಹ ಕಾದಂಬರಿಯ ಒಟ್ಟು ತಂತ್ರದ ಒಂದು ಭಾಗವಾಗಿಯೇ ಇವೆ ಎಂಬ ಅಂಶವನ್ನು ಗಮನಿಸಬಹುದಾಗಿದೆ. ಮನುಷ್ಯ ಜಗತ್ತಿನೊಂದಿಗೆ ಇರುವ ಸಾವಯವ ಸಂಬಂಧದ ಭಾಗವಾಗಿಯೇ ಪ್ರಾಣಿ ಜಗತ್ತು ಪ್ರಾಕೃತಿಕ ಜಗತ್ತು ಕಾಣಿಸಿಕೊಳ್ಳುವುದೂ ಸಹ ಕಾದಂಬರಿಯ ಬಂಧದಲ್ಲಿ ಹೊಸ ಅರ್ಥ ಮತ್ತು ಸಾಂಕೇತಿಕತೆಯನ್ನು ಧ್ವನಿಸುವಂತೆ ಮಾಡುವುದು ಸಹ ಈ ತಂತ್ರದ ಭಾಗವೆಂದೇ ಹೇಳಬಹುದು.

**ನಿರೂಪಣೆ**

ಕಾದಂಬರಿಯಲ್ಲಿ ಬರುವ ವಿವಿಧ ಸಾಮಾಜಿಕ ವರ್ಗಗಳಿಗನುಸಾರವಾಗಿ ಪಾತ್ರಗಳ ಸಂಭಾಷಣೆಯಲ್ಲಿ ಮತ್ತು ನಿರೂಪಣೆಯಲ್ಲಿ ಬಳಸುವ ಭಾಷೆ ಕೂಡ ಭಿನ್ನವಾಗಿದೆ. ಬ್ರಾಹ್ಮಣ ಪಾತ್ರಗಳ ಭಾಷೆಗೂ ಲಕ್ಕನಂತಹ ಪಾತ್ರಗಳು ಮಾತನಾಡುವ ಭಾಷೆಗೂ ಅಂತರವಿದೆ. ಲೇಖಕರು ಈ ಬಗೆಯ ಭಾಷಾ ಬಳಕೆಯಲ್ಲಿ ವಿಶಿಷ್ಟ ಪ್ರಯೋಗವನ್ನು ಮಾಡಿದ್ದಾರೆಂದೇ ಹೇಳಬೇಕಾಗುತ್ತದೆ. ಇದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆಂಬುದರಲ್ಲಿ ಸಂಶಯವಿಲ್ಲ. ಆದರೆ ಕೆಲ ವಿಮರ್ಶಕರು ಗುರುತಿಸುವಂತೆ ಹಲವೆಡೆ ಇದು ಅಭಾಸಕ್ಕೆ ಕಾರಣವಾದಾಗ್ಯೂ ಬಹುತೇಕ ಈ ಭಾಷಾ ಬಳಕೆಯ ಪ್ರಯೋಗವು ಕಾದಂಬರಿಗೆ ಹೊಸತನವನ್ನೇ ನೀಡಿದೆಯೆಂಬುದರಲ್ಲಿ ಅನುಮಾನವಿಲ್ಲ.

ಲಕ್ಕ ಮತ್ತು ರುಕ್ಮಿಣಿಯಂತಹ ಪಾತ್ರಗಳು ತಮ್ಮ ನೋವು ನಲಿವುಗಳನ್ನು ಮತ್ತು ಪ್ರಜ್ಞೆಯಲ್ಲಿ ದಾಖಲಾದ ಅನುಭವಗಳನ್ನು ಹೇಳಿಕೊಳ್ಳುತ್ತಾ ಹೋಗುವದು ಕೂಡಾ ತಂತ್ರಗಾರಿಕೆಯ ಭಾಗವಾಗಿರುವಂತೆ ನಿರೂಪಣಾ ವಿಧಾನದ ಬಗೆಯೂ ಆಗಿರುವುದನ್ನು ಗಮನಿಸಬಹುದಾಗಿದೆ. ಕಾದಂಬರಿಯ ಹರವು ವಿಸ್ತಾರವಾದುದಾಗಿದೆ. ಇಂತಹ ವಿಸ್ತಾರದ ಹರಿವಿನಲ್ಲಿ ಅಲ್ಲಲ್ಲಿ ಧ್ವನಿರಮ್ಯತೆಯ ಅಡುಗುದಾಣಗಳೂ ಇವೆ. ಹಾಗೆಯೇ ಇಂತಹ ಧ್ವನಿರಮ್ಯತೆಗಳೂ ಕಾದಂಬರಿಯ ಒಟ್ಟು ಅಂತಿಮ ಧ್ವನಿ ಸಾಧ್ಯತೆಯಲ್ಲಿ ಕೆಲವು ಪೂರಕವಾಗಿ ಬಂದರೆ ಮತ್ತೆ ಕೆಲವು ಪ್ರತ್ಯೇಕವಾಗಿಯೇ ಉಳಿಯುತ್ತವೆ ಎನಿಸಬಹುದು. ಇಂತಹ ಅನ್ನಿಸಿಕೆಯು ಕಾದಂಬರಿಯ ವಸ್ತುವಿನ ಅಗಾಧತೆಯನ್ನು ಮತ್ತು ಸಂಕೀರ್ಣತೆಯನ್ನು ಸೂಚಿಸುತ್ತದೆಯಷ್ಟೆ. ಇಡೀ ಕಾದಂಬರಿಯ ವಸ್ತು ವಿನಾಶವಾಗುತ್ತಿರುವ ಹಳ್ಳಿಯೊದರ ಚಿತ್ರಣವಾಗಿದ್ದಾಗ್ಯೂ ಆ ವಿನಾಶದ ಒಡಲಲ್ಲಿಯೇ ಹೊಸತನ್ನು ಸೃಷ್ಟಿಸುವ ಬೀಜಾಂಕುರವೂ ಹುದುಗಿರುವ ಸಾಧ್ಯತೆಯನ್ನು ಲೇಖಕರು ನಿರೂಪಿಸುತ್ತಾರೆ. ಇಂತಲ್ಲಿ ಪ್ರಾಣಿ ಪಕ್ಷಿಗಳ ಸಂದರ್ಭಗಳನ್ನೂ ಸಾಂಕೇತಿಕವಾಗಿ ಬಳಸಿಕೊಳ್ಳಲಾಗಿದೆ. ಪ್ರಾಕೃತಿಕ ಬದಲಾವಣೆಗಳನ್ನೂ ಅಂದರೆ ಋತುಮಾನಗಳನ್ನು ಬಳಸಿಕೊಳ್ಳಲಾಗಿದೆ. ವೈಶಾಖದ ಹೆಸರೇ ಸೂಚಿಸುವಂತೆ ಅದು ಪ್ರಾಕೃತಿಕ ಬದಲಾವಣೆಯ ಸೂಚಕವಾಗಿದೆ. ಹೊಸತಿನ, ಹೊಸ ಬದುಕಿನ ಆಶಾವಾದದ ಸಂಕೇತವಾಗಿದೆ.

**ವ್ಯಾಪ್ತಿ**

ಇದು ಪ್ರಧಾನವಾಗಿ ಕೃತಿ ಕೇಂದ್ರಿತ ಅಧ್ಯಯನವಾಗಿದೆ. ಚದುರಂಗರ ವೈಶಾಖ ಕಾದಂಬರಿಯು ಪ್ರಕಟಗೊಂಡದ್ದು ೧೯೮೮ರಲ್ಲಿ. ಇದು ಅವರ ಮೂರನೆಯ ಕಾದಂಬರಿಯಾಗಿದೆ. ಸರ್ವಮಂಗಳ ಇವರ ಮೊದಲ ಕಾದಂಬರಿಯಾದರೆ, ಎರಡನೆಯದು ಉಯ್ಯಾಲೆಯಾಗಿದೆ. ಉಯ್ಯಾಲೆಯನ್ನು ಬರೆದ ೨೦ ವರ್ಷಗಳ ನಂತರ ವೈಶಾಖ ಕಾದಂಬರಿಯನ್ನು ರಚಿಸಲಾಗಿದೆ. ವೈಶಾಖದ ನಂತರ ಚದುರಂಗರು ಹೆಜ್ಜಾಲ ಕಾದಂಬರಿಯನ್ನು ರಚಿಸಿದರು. ಹೈಜ್ಜಾಲವನ್ನು ಹೊರೆತು ಪಡಿಸಿದಂತೆ ವೈಶಾಖಕ್ಕಿಂತ ಮುಂಚೆ ಬರೆದ ಕಾದಂಬರಿಗಳ ಕಥನ ಕಲೆ ಮತ್ತು ನಂತರದ ವೈಶಾಖದ ಕಥನಕಲೆಗೂ ಸಾವಯವ ಸಂಬಂಧವಿರುವುದನ್ನು ಗುರುತಿಸಬಹುದಾಗಿದೆ. ಈ ಮೂರೂ ಕಾದಂಬರಿಗಳ ಮೂಲಕ ವಿಸ್ತರಿಸಿದ ಚದುರಂಗರ ಜೀವನ ದೃಷ್ಟಿ ವೈಶಾಖ್ಯದಲ್ಲಿ ಉತ್ತುಂಗಕ್ಕೆ ಏರಿದೆ. ಹಾಗೆಯೇ ಕಥನ ಕಲೆಯು ಕೂಡ ಪರಿಪಕ್ವವಾಗಿದೆ. ಈ ಅಧ್ಯಯನವು ಪ್ರಧಾನವಾಗಿ ವೈಶಾಖವನ್ನೇ ಕೇಂದ್ರೀಕರಿಸಿದರೂ ಉಳಿದ ಕೃತಿಗಳಲ್ಲಿ ಪ್ರಕಟಗೊಂಡ ಲೇಖಕರ ಜೀವನದೃಷ್ಟಿಯನ್ನು ಪೂರಕವಾಗಿ ವೈಶಾಖದ ಕಥನದ ಅಂತಿಮ ಪರಿಣಾಮದ ಜೊತೆಗೆ ವಿಶ್ಲೇಷಿಸಲಾಗುತ್ತದೆ. ಹೀಗಾಗಿ ಇದು ಸಂಪೂರ್ಣ ವೈಶಾಖದ ಕುರಿತ ಅಧ್ಯಯನವೇ ಆಗಿದ್ದರೂ ವೈಶಾಖದ ಜೊತೆಯಲ್ಲಿ ಚದುರಂಗರ ಇನ್ನಿತರ ಕೃತಿಗಳ ಪೂರಕ ಅಧ್ಯಯನವಾಗಿದೆಯೆಂದರೂ ತಪ್ಪಾಗಲಿಕ್ಕಿಲ್ಲ.

**ಅಧ್ಯಯನ ವಿಧಾನ**

ಕಾದಂಬರಿಯ ಹೆಸರೇ ಸೂಚಿಸುವಂತೆ ವೈಶಾಖವು ಒಂದು ಸಂಕೇತವೇ? ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗುತ್ತದೆ. ಕಾದಂಬರಿಯ ಪ್ರಧಾನ ಪಾತ್ರವಾದ ಲಕ್ಕನನ್ನು ಊರಿನವರು ಬಹಿಷ್ಕಾರ

ಹಾಕಿದ್ದುದು ವೈಶಾಖ ಮಾಸದ ಪೂರ್ಣಿಮೆಯಂದು. ಹಾಗಾಗಿ ಲಕ್ಕನ ಕಾರಣದಿಂದಾಗಿಯೇ ಈ ಕೃತಿಗೆ ವೈಶಾಖ ಎಂದು ಹೆಸರಿಡಲಾಗಿದೆಯೇ ಎಂಬ ಅನುಮಾನವೂ ಕಾಡುತ್ತದೆ. ಆದರೆ ಕಾದಂಬರಿಯಲ್ಲಿ ಯಾವ ಪಾತ್ರವೂ ಪ್ರಧಾನವಾದುದಲ್ಲ ಎಂಬ ಅಂಶವೂ ಗೋಚರಿಸುತ್ತದೆ. ಇಡೀ ಕಾದಂಬರಿಯು ದರುಮನಹಳ್ಳಿಯ ಮೇಲ್ವರ್ಗ ಮತ್ತು ಕೆಳವರ್ಗದ ನಡುವಣ ಮಾನವೀಯ ಸಂಬಂಧಗಳು, ಗ್ರಾಮೀಣ ಜಗತ್ತಿನ ಲೈಂಗಿಕ ಸಂಬಂಧಗಳು, ಕ್ಷುದ್ರ ರಾಜಕೀಯವನ್ನೊಳಗೊಂಡಂತೆ ಇಡೀ ಊರಿನ ಅವಸಾನದ ಚಿತ್ರಣವನ್ನು ನೀಡುತ್ತದೆ. ಇಂತಲ್ಲಿ ವೈಶಾಖ ಏನನ್ನು ಪ್ರತಿನಿಧಿಸುತ್ತದೆ? ಡಾ. ಕೆ. ವಿ. ನಾರಾಯಣ ಅವರು "ಕಾದಂಬರಿಯ ಹೆಸರು ವೈಶಾಖ. ಲಕ್ಕನಿಗೆ ಊರಿನವರು ಬಹಿಷ್ಕಾರ ಹಾಕುವುದು ವೈಶಾಖದ ಪೂರ್ಣಿಮೆಯಂದು. ಓದುಗರ ಭಾವಕೋಶದಲ್ಲಿ ಈ ದಿನದ ಮಹತ್ವವನ್ನು ಕುರಿತಂತೆ ಇರುವ ತಿಳಿವಿಗೂ, ಕಾದಂಬರಿಯ ಈ ಘಟನೆಗೂ ಸಂಬಂಧ ಕಲ್ಪಿಸುವ ಯತ್ನವಿದ್ದರೆ ಅದು ಸಾರ್ಥಕವಾಗಲಾರದು. ಆದರೆ ವೈಶಾಖ ಗ್ರೀಷ್ಮದ ತತ್ತಿಗಳನ್ನಿಡುವುದು ಸುರಿಯಲಿರುವ ಮಳೆಗಳು ಮೋಡಕಟ್ಟುವುದು ಈ ಕಾಲದಲ್ಲೆ. ಆದ್ದರಿಂದ ಬರಲಿರುವ ದಿನಗಳ ಬದಲಾವಣೆಯ ಮುನ್ನುಡಿಯು ಘಟಿಸುತ್ತಿರುವ ಅವಧಿಗೆ ವೈಶಾಖವೆಂದು ಹೆಸರಿಸಿರುವ ಸಾಧ್ಯತೆಗಳಿವೆ" ಎಂಬ ಅಭಿಪ್ರಾಯಕ್ಕೆ ಬರುತ್ತಾರೆ. ಈ ಅಭಿಪ್ರಾಯದೊಂದಿಗೆ ಏಕೀಭವಿಸಬಹುದಾಗಿದೆ. ಕಾದಂಬರಿಯು ತನ್ನ ಒಡಲೊಳಗೆ ಬದುಕಿನ ಹೊಸ ಸಾಧ್ಯತೆಗಳನ್ನು ಒಳಗೊಂಡಿರುವುದನ್ನು ಸೂಚಿಸುವ ಸಂಕೇತವಾಗಿಯೇ 'ವೈಶಾಖ' ಶೀರ್ಷಿಕೆಯನ್ನು ಗಮನಿಸಬೇಕಾಗುತ್ತದೆ.

ಪ್ರಸ್ತುತ ಅಧ್ಯಯನವನ್ನು ಪ್ರಧಾನವಾಗಿ ಕೃತಿ ಕೇಂದ್ರಿತ ಅಧ್ಯಯನವನ್ನಾಗಿ ಪರಿಗಣಿಸಿರುವುದರಿಂದ ವೈಶಾಖ ಕಾದಂಬರಿಯನ್ನು ಪ್ರಮುಖವಾಗಿ ಪರಿಗಣಿಸಲಾಗಿದೆ. ಸ್ವತಃ ಚದುರಂಗರು ಹಳ್ಳಿಯಲ್ಲೇ ನೆಲೆ ನಿಂತು ಕೃಷಿಕರಾಗಿ ಕಷ್ಟದ ಬದುಕನ್ನು ಕಂಡವರು. ಅವರ ಈ ಅನುಭವ ವೈಶಾಖದಲ್ಲಿ ಕಲಾತ್ಮಕ ಅಭಿವ್ಯಕ್ತಿಯನ್ನು ಕಂಡಿದೆ. ಕನ್ನಡ ಸಂಶೋಧನಾ ಜಗತ್ತಿನಲ್ಲಿ ಕೃತಿಕೇಂದ್ರಿತ ಅದರಲ್ಲೂ ಕಾದಂಬರಿಗಳನ್ನು ಆಧರಿಸಿದ ಅಧ್ಯಯನಗಳು ಪ್ರಸ್ತುತ ಅಧ್ಯನಕ್ಕೆ ಮಾದರಿಯಾಗಿವೆ. ವಿಶೇಷವಾಗಿ ಈ ಅಧ್ಯಯನದಲ್ಲಿ ಚದುರಂಗರ ವೈಯಕ್ತಿಕ ಬದುಕಿನ ವಿವರಗಳನ್ನು ಅವರ ಕಲಾತ್ಮಕ ಅಭಿವ್ಯಕ್ತಿಯೊಂದಿಗೆ ತುಲನೆ ಮಾಡುವ ಮೂಲಕ ಒಬ್ಬ ಸೃಜನಶೀಲ ಲೇಖಕನ ಅನುಭವಗಳು ಸಾಹಿತ್ಯ ಜಗತ್ತಿನಲ್ಲಿ ಅರಳುವ ಬಗೆಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗುತ್ತದೆ. ಹಾಗೆಯೇ ಚದುರಂಗರು ವೈಶಾಖದಲ್ಲಿ ಬಳಕೆ ಮಾಡಿದ ಮೈಸೂರು ಭಾಗದ ಉಪಭಾಷೆಯನ್ನು ಸಹ ಕಾದಂಬರಿಯ ಚೌಕಟ್ಟಿನಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗುತ್ತದೆ.

ಚದುರಂಗರು ಸಣ್ಣ ಕಥೆಗಳನ್ನು ರಚಿಸಿದ್ದರೂ ಸಹ ಕಾದಂಬರಿಯನ್ನೇ ಯಶಸ್ವಿ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಿಕೊಂಡರು. ಈ ಅಂಶ ಸಹ ಕುತೂಹಲಕಾರಿಯಾಗಿದೆ. ಈ ಅಧ್ಯಯನದ ವ್ಯಾಪ್ತಿಯಲ್ಲಿ ಈ ಅಂಶವನ್ನೂ ಸಹ ಚರ್ಚಿಸಲಾಗುವುದು.

ಕಾದಂಬರಿಯಲ್ಲಿ ಚಿತ್ರಿತವಾಗಿರುವ ಶಿಷ್ಟ ಜಗತ್ತಿನೊಂದಿಗೆ ಜನಪದ ಜಗತ್ತೂ ಸಹ ಓದುರನ್ನು ಸೆಳೆಯುತ್ತದೆ. ಇವರು ಚಿತ್ರಿಸಿರುವ ಬ್ರಾಹ್ಮಣರ ಜಗತ್ತಿನೊಂದಿಗೆ ಲಕ್ಕನಂತಹ ಕೆಳವರ್ಗದ ಸಮಾಜವನ್ನು ಚಿತ್ರಿಸುವಾಗ ಬಳಸುವ ಜನಪದ ಭಾಷೆ ಮತ್ತು ಪ್ರತಿಮೆಗಳು ಅಧ್ಯಯನಯೋಗ್ಯವೆನಿಸುತ್ತವೆ.

"ಕಾದಂಬರಿಯ ಆರಂಭದಲ್ಲಿ ಲಕ್ಕ ಅಂದುಕೊಂಡಂತೆ ಪಂಚಾಯಿತಿದಾರರ ನ್ಯಾಯದ ದಾಳ ಲಕ್ಕನ ಮುಖಕ್ಕೆ ಹೊಡೆಯುತ್ತದೆ. ಕಾದಂಬರಿಯ ಜನಪದ ಲೋಕದಲ್ಲಿ ಬರುವ ಹೆಣ್ಣು ಗಂಡಿನ ಸಂಬಂಧಗಳ ವ್ಯವಹಾರಕ್ಕೆ ಪೂರಕವಾಗಿ ನಾವು ನಮ್ಮ ಗಮನವನ್ನು ಕೊಂಚ ಜನಪದ ಸಾಹಿತ್ಯದ ಕಡೆಗೆ ಹೊರಳಿಸಿ ನೋಡುವ ಅಗತ್ಯವಿದೆಯೆನಿಸುತ್ತದೆ" ಎಂದು ಕೃಷ್ಣಮೂರ್ತಿ ಹನೂರು ಅವರು ಅಭಿಪ್ರಾಯಪಡುತ್ತಾರೆ.

ಅಗ್ರಹಾರದ ಉಚ್ಚ ವರ್ಣದ ಸಮಾಜದ ಲೈಂಗಿಕ ಜಗತ್ತಿಗೂ ಮತ್ತು ಕೆಳವರ್ಗದ ಲೈಂಗಿಕ ಜಗತ್ತಿಗೂ ಇರುವ ಅಂತರವನ್ನು ಈ ಕೃತಿ ನಿಖರವಾಗಿ ದಾಖಲಿಸುತ್ತದೆ. ಶಿಷ್ಟ ಸಮಾಜವು ಅನೈತಿಕವೆಂದು ಹೇಳಲಾಗುವ ಸಂಬಂಧಗಳು ಕೆಳವರ್ಗದಲ್ಲಿ ಸಹಜ ನ್ಯಾಯವಾಗಿ ಬಿಡುತ್ತವೆ. ಮೇಲ್ವರ್ಗದ ಸಮಾಜದಲ್ಲಿ ಜೀವ ವಿರೋಧದ ನೆಲೆಗಳಿದ್ದರೆ ಕೆಳವರ್ಗದ ಸಮಾಜದಲ್ಲಿ ಜೀವನ ಪ್ರೀತಿಯ ಮೌಲ್ಯಗಳು ಕಂಡುಬರುವುದನ್ನು ಆಡುಭಾಷೆಯಲ್ಲಿಯೇ ನಿರೂಪಿಸಿರುವುದು ಮೆಚ್ಚುಗೆಗೆ ಪಾತ್ರವಾಗುತ್ತದೆ. ಹೀಗೆ ಆಡು ನುಡಿಯನ್ನು ಅಭಿವ್ಯಕ್ತಿಯ ಮಾಧ್ಯಮವಾಗಿ ಬಳಸುವಾಗ ಸಹಜವಾಗಿಯೇ ಜನಪದದ ಮಟ್ಟುಗಳು ನಿರೂಪಣೆಯ ಭಾಷೆಯನ್ನು ಪ್ರವೇಶಿಸಿರುವುದನ್ನು ಈ ಅಧ್ಯಯನದ ಸಂದರ್ಭದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ.

ಹಾಗೆಯೇ ಈ ಕಾದಂಬರಿಯಲ್ಲಿ ಎಡೆ ಪಡೆದಿರುವ ಪ್ರಾಣಿ ಜಗತ್ತು ಕೂಡಾ ಅದ್ಭುತವಾಗಿದೆ. ಮತ್ತು ಅಧ್ಯಯನದ ವಿಶ್ಲೇಷಣೆಯನ್ನು ಬಯಸುತ್ತದೆ. ಉದಾಹರಣೆಗೆ ಪೊರೆ ಕಳಚಿದ ಹಾವನ್ನು ಸಾಯಿಸುವ ಇರುವೆ ಹಿಂಡು, ಆಗ ತಾನೆ ಮರಿ ಹಾಕಿದ ಆನೆ, ಆನೆಯ ಮರಿಯನ್ನು ಜೀವ ಜಗತ್ತಿಗೆ ಸ್ವಾಗತಿಸುವ ಸಹಚರ ಆನೆಗಳ ಜೀವನಪ್ರೀತಿಯನ್ನು ಮನುಷ್ಯ ಜಗತ್ತಿನೊಂದಿಗೆ ಹೋಲಿಸುವ ಪರಿ ಅತ್ಯಂತ ಸಾಂಕೇತಿಕವಾದುದಾಗಿದೆ.

ಈ ಹಿನ್ನೆಲೆಯಲ್ಲಿ ವೈಶಾಖ ಕಾದಂಬರಿಯು ಕನ್ನಡ ಕಾದಂಬರಿ ಜಗತ್ತಿನಲ್ಲಿ ಅದು ಕಟ್ಟಿಕೊಡುವ ಗ್ರಾಮೀಣ ಜಗತ್ತಿನ ಬದುಕಿನ ವೈವಿಧ್ಯಗಳು, ಸಾಮಾಜಿಕ ಕ್ರೌರ್ಯ, ಲೈಂಗಿಕ ಜಗತ್ತು ಇದೆಲ್ಲವನ್ನೂ ಒಳಗೊಂಡಂತೆ ಛಿದ್ರಗೊಳ್ಳುತ್ತಿರುವ ಭಾರತೀಯ ಗ್ರಾಮೀಣ ಜಗತನ್ನು ಅಸದೃಶವಾಗಿ ಹಿಡಿದಿಡುತ್ತದೆ. ಒಟ್ಟಿನಲ್ಲಿ ಈ ರೀತಿಯ ಅವಸಾನದ ಮೂಲಕ ಹೊಸತೊಂದು ಬದುಕಿನ, ಬದಲಾವಣೆಯ ಸಾಧ್ಯತೆಯ ಹೊಸ ಮುಂಬೆಳಗು ಕಾಣಿಸುವುದು ಕೂಡಾ ಹೊಸ ಅರ್ಥಸಾಧ್ಯತೆಗಳನ್ನು ಹೇಳುತ್ತದೆ. ಈ ಮುಂಬೆಳಗು ಕೃಶವಾದ ಕೃಷ್ಣಶಾಸ್ತ್ರಿಯನ್ನು ಪ್ರತಿನಿಧಿಸುವ ಸಮಾಜದ ಅವಸಾನದ ಒಡಲೊಳಗಿಂದ ಕೆಳವರ್ಗದ ಲಕ್ಕನ ಮೂಲಕ ಕಾಣಿಸಿಕೊಂಡ ಬೆಳಕಾಗಿದೆ.

## ಅಧ್ಯಾಯ ಎರಡು

# 'ವೈಶಾಖ' ವರ್ಗ, ವರ್ಣ ಮತ್ತು ಜಾತಿ ಸಂಘರ್ಷದ ಸ್ವರೂಪ

ಭಾರತೀಯ ಗ್ರಾಮ ಸಮಾಜದ ರಚನೆಯೇ ಮನುವಾದದ ಮೇಲೆ ನಿಂತಿದೆ. ಸ್ತ್ರೀಯರ ಕುರಿತಾಗಿ ಮನು ಹೇಳಿದ್ದೇ ಇಂದಿಗೂ ಕಂದಾಚಾರದ ಸಮಾಜದಲ್ಲಿ ಚಾಲ್ತಿಯಲ್ಲಿದೆ. ಅಂದರೆ ಇದು ಅಸಮಾನತೆಯನ್ನು ಪ್ರತಿನಿಧಿಸುವ ಸಮಾಜದ ಸಂರಚನೆಯಾಗಿದೆ. ಮೂಲದಲ್ಲಿಯೇ ಇದ್ದ ಇಂತಹ ಸಂರಚನೆಗೆ ಶಾಸನಾತ್ಮಕ ಸ್ವರೂಪ ನೀಡಿದವನು ಮನು.

ಮನುಷ್ಯ ನಾಗರೀಕನಾದರೂ ಸುಶಿಕ್ಷಿತನಾದರೂ ಸಹ ಜಾತಿಯ ಕಪಿಮುಷ್ಠಿಯಿಂದ ಬಿಡುಗಡೆಯನ್ನು ಪಡೆಯಲು ೨೧ ನೇ ಶತಮಾನದಲ್ಲಿ ಮನುಷ್ಯನಿಗೆ ಸಾಧ್ಯವಾಗಿಲ್ಲ. ಇಂದು ಜಾತಿಯ ಆಚರಣೆ ಹಿಂದಿನಷ್ಟು ಜಟಿಲವಾಗಿರದಿದ್ದರೂ ಸಹ ಅದರ ಅಸ್ತಿತ್ವ ಸಮಾಜದಲ್ಲಿ ಬೇರೂರಿದೆ. ಪ್ರಾಚೀನ ಕಾಲದಲ್ಲಿ ಸಮಾಜದ ವ್ಯವಸ್ಥೆ, ಆಳುವ ವರ್ಗ ಅದನ್ನು ಪೋಷಿಸಿ ನೀರೆರದರೆ ಇಂದು ಸರ್ಕಾರ ಆಯಾ ಜಾತಿಗೆ ಸೇರಿದ ಮಠ ಮಂದಿರಗಳು ಜಾತಿಯನ್ನು ಜೀವಂತವಾಗಿ ಉಳಿಯಲು ಆ ಮೂಲಕ ಅವುಗಳು ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಸಾಧ್ಯವಾಗಿದೆ.

ಜಾತಿಯ ಅಸ್ತಿತ್ವ ಸಮಾಜದಲ್ಲಿ ಯಾವಾಗ ಆಗಿರಬಹುದೆಂದು ಇತಿಹಾಸವನ್ನು ಚರಿತ್ರೆಯನ್ನು ಅವಲೋಕಿಸಿದಾಗ ವೇದಗಳ ಆರಂಭದ ಕಾಲದಲ್ಲಿ ಅಂದರೆ ಋಗ್ವೇದದ ಕಾಲದಲ್ಲಿ ಯಾವುದೇ ಜಾತಿಯ ಆಚರಣೆಯಾಗಲಿ, ಲಿಂಗತಾರತಮ್ಯವಾಗಲಿ ಇಲ್ಲದಿರುವುದು ಕಂಡುಬರುತ್ತದೆ. ಆದರೆ ನಂತರದ ವೇದಗಳ ವೇಳೆಗಾಗಲೇ ಜಾತಿ, ಲಿಂಗ ತಾರತಮ್ಯ ಸಮಾಜದಲ್ಲಿ ಉಗಮವಾಗಿದ್ದನ್ನು ಕಾಣಬಹುದು. ಹೀಗೆ ಬುದ್ಧಿವಂತನಾದ ಮನುಷ್ಯ ತನ್ನ ಅನುಕೂಲಕ್ಕೆ ತಕ್ಕಂತೆ ಧರ್ಮಶಾಸ್ತ್ರಗಳನ್ನು, ಇನ್ನಿತರ ಶಾಸ್ತ್ರಗ್ರಂಥಗಳನ್ನು ರಚಿಸಿಕೊಂಡು ಅದರಲ್ಲಿ ಇಂತಹ ಜಾತಿಯವರೆಲ್ಲಾ ಶ್ರೇಷ್ಠರು, ಇಂತಹವರು ಕನಿಷ್ಟರು, ಈ ಕನಿಷ್ಟರು ಶ್ರೇಷ್ಠರ ಸೇವೆಯನ್ನು ಮಾಡುತ್ತಾ ಅವರ ಅಧೀನರಾಗಿ ಇರಬೇಕೆಂದು, ಇಲ್ಲವಾದರೆ ಅವರಿಗೆ ನರಕದ ಭಯವನ್ನು, ದೈವದ ಭಯವನ್ನು ಹುಟ್ಟಿಸಿ ಕೆಳಜಾತಿಯವರಿಂದ ತಮಗೆ ಅಗತ್ಯವಾದ ಎಲ್ಲಾ ಕೆಲಸವನ್ನು

ಮಾಡಿಸಿಕೊಳ್ಳುತ್ತಾ ಅವರನ್ನು ಶೋಷಣೆ ಮಾಡುತ್ತಾ ತನ್ನ ಆಕ್ಟೋಪಸ್ ಹಿಡಿತದಲ್ಲಿ ಸಹಸ್ರಾರು ವರ್ಷಗಳು ಉಳಿಸಿಕೊಂಡಿರುವುದು ಇತಿಹಾಸದ ಪುಟಗಳಲ್ಲಿ ಅವಲೋಕಿಸಬಹುದು.

ಹೀಗೆ ಜಾತಿಯ ಇತಿಹಾಸವನ್ನು ಅವಲೋಕಿಸಿದಾಗ ಸ್ವಾರ್ಥವನ್ನು ತನ್ನ ಆಚರಣೆಯಲ್ಲಿ ಅಡಗಿಸಿಕೊಂಡಿರುವುದು ತಿಳಿಯುತ್ತದೆ. ಕೇವಲ ಮೇಲ್ವರ್ಗದವರ ಸ್ವಾರ್ಥಕ್ಕಾಗಿ ಉಳಿದ ಜನರ ಶೋಷಣೆ ನಿರಂತರವಾಗಿ ಸಾಗಿತ್ತು. ಶ್ರೇಣೀಕೃತ ವ್ಯವಸ್ಥೆಯ ಸಮಾಜದಲ್ಲಿ ಚಾತುರ್ವಣ್ಯದ ಆಚರಣೆಯನ್ನು ತಂದು ಅವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಭಾಗಿಸಿಕೊಂಡು, ಬ್ರಾಹ್ಮಣ ಬ್ರಹ್ಮನ ಮುಖದಿಂದ, ಕ್ಷತ್ರಿಯ ಭುಜಗಳಿಂದಲೂ, ವೈಶ್ಯ ಉದರದಿಂದಲೂ ಮತ್ತು ಕೊನೆಯ ಶೂದ್ರ ಬ್ರಹ್ಮನ ಪಾದಗಳಿಂದಲೂ ಜನಿಸಿದ್ದಾನೆ ಎಂದು ಕತೆ ಕಟ್ಟಿ, ಪಾದಗಳಿಂದ ಜನಿಸಿದ ಶೂದ್ರ ಉಳಿದ ಮೂರು ಜಾತಿಯವರ ಸೇವೆಯನ್ನು ಮಾಡಿಕೊಂಡಿರಬೇಕು ಎಂದು ಶಾಸ್ತ್ರಗಳು ಬಾಯಿಂದ ವದರಿಸಿ ಶತಮಾನಗಳ ಕಾಲ ಶೂದ್ರವರ್ಗವನ್ನು ತಮ್ಮ ಚಾಕಿರಿ ಮಾಡಲು ಉಳಿಸಿಕೊಂಡಿರುವುದು ಇತಿಹಾಸದ ಹೀನ ಹೇಯ ಕೃತ್ಯಗಳಲ್ಲಿ ಒಂದು. ಇಷ್ಟೆಲ್ಲಾ ಕರ್ಮಠಗಳು ಕ್ರಿಸ್ತಪೂರ್ವಕ್ಕೆ ಸಂಬಂಧಿಸಿದ್ದರೆ, ಕ್ರಿಸ್ತಶಕದ ನಂತರದಲ್ಲೂ ಅದು ಮುಂದುವರೆದು ಬಂದಿರುವುದನ್ನು, ಶಾಸನಗಳಲ್ಲಿ, ಕಾವ್ಯ ಕೃತಿಗಳಲ್ಲಿ ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಕನ್ನಡದ ಆದಿಕವಿ ಪಂಪನ ಕಾಲದ ಸಾಮಾಜಿಕ ವ್ಯವಸ್ಥೆಯ ಚಿತ್ರಣವನ್ನು ಅವನ ಎರಡು ಮಹಾಕಾವ್ಯಗಳಲ್ಲಿ ನೀಡುತ್ತಾನೆ. ಅದರಲ್ಲಿ ಪಂಪಭಾರತದ ಕೃತಿಯೊಳಗೆ ಬರುವ ಕರ್ಣ, ವಿದುರ, ಏಕಲವ್ಯ, ಇವರೆಲ್ಲರ ಮೂಲಕ ಪಂಪ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಕಟ್ಟಿಕೊಡುತ್ತಾನೆ. ಇವರೆಲ್ಲರೂ ಸಮಾಜದ ದೃಷ್ಟಿಯಲ್ಲಿ ಕೀಳುಜಾತಿಯಲ್ಲಿ ಜನಿಸಿದವರು, ಇವರಿಗೆ ನಿಜವಾದ ಸಾಮರ್ಥ್ಯ, ಯೋಗ್ಯತೆ ಇದ್ದರೂ ಅವರು ವ್ಯವಸ್ಥೆಯಿಂದ, ಅವಕಾಶದಿಂದ ಹೊರದೂಡಲ್ಪಡುವುದನ್ನು ಈ ಪಾತ್ರಗಳ ಮೂಲಕ ಪಂಪ ಹೇಳಿಸುತ್ತಾನೆ. ಕರ್ಣನ ಮೂಲಕ ಪಂಪ ಹೇಳಿಸುವ

ಕುಲಂ ಕುಲಂ ಮಲ್ತು ಛಲಂ ಕುಲಂ ಗುಣಂ ಕುಲಂ

ಅಣ್ಮುಂ ಕುಲಂ ಅಭಿಮಾನವೊಂದೆ ಕುಲಂ

ಎಂದು ಹೇಳುವುದರ ಮೂಲಕ ಅದುವರೆಗೆ ಜಾತಿ ವ್ಯವಸ್ಥೆಯಲ್ಲಿ ಬೆಂದು ಬೆಂಡಾದ ಕೆಳ ಜಾತಿಯ ಪ್ರತಿನಿಧಿಯಾಗಿ ಕರ್ಣ ನಿಲ್ಲುತ್ತಾನೆ.

ನಂತರ ಬಂದ ವಚನಕಾರರು ಪಂಪನ ಸೌಮ್ಯನೆಲೆಯಿಂದ ಕೊಂಚ ಮುಂದೆ ಬಂದು ಸಾಮಾಜಿಕ ಸಮಾನತೆಯಿಂದ ಎಲ್ಲಾ ವಚನಕಾರರು ಶ್ರಮಿಸಿರುವುದು ಅವರ ಮಹಾಮನೆಯ ಸ್ಥಾಪನೆಯಲ್ಲಿ ಮತ್ತು ಅಂತರ್ಜಾತಿಯ ವಿವಾಹ ಮಾಡುವುದು ದಿಟ್ಟತನದಲ್ಲಿ

ಲಿಂಗತಾರಮ್ಯವಿಲ್ಲದೆ ಎಲ್ಲರೂ ಒಟ್ಟಾಗಿ ಕುಳಿತು ವಚನಗಳನ್ನು ರಚಿಸಿರುವುದು ಇವೆಲ್ಲವನ್ನೂ ಗಮನಿಸಿದಾಗ ಬಸವಣ್ಣನೇ ಮೊದಲಾಗಿ ಎಲ್ಲಾ ವಚನಕಾರರು ಸಹ ಸಾಮಾಜಿಕ ಸಮಾನತೆಗಾಗಿ ಹೋರಾಡಿರುವುದನ್ನು ಅವರ ವಚನಗಳ ಮೂಲಕ ಕಾಣಬಹುದು.

ಸರ್ವಜ್ಞ ಕವಿಯು ಸಹ ಜಾತಿಯತೆಯ ಆಚರಣೆಯನ್ನು ತೀವ್ರವಾಗಿ ಖಂಡಿಸಿರುವುದನ್ನು ಆತನ ತ್ರಿಪದಿಯಲ್ಲಿ

ಜಾತಿಹೀನನ ಮನೆಯ

ಜ್ಯೋತಿ ತಾ ಹೀನವೇ ಜಾತಿ

ವಿಜಾತಿ ಎನಬೇಡ ದೇವನೊಲಿದಾತನೇ ಜಾತ ಸರ್ವಜ್ಞ

ಎಂದು ಹೇಳುವ ಮೂಲಕ ನಿಜವಾದದ್ದು ಜಾತಿಯಲ್ಲ, ಮನುಷ್ಯನ ಯೋಗ್ಯತೆಯೆಂದು ಹೇಳುತ್ತಾನೆ.

ನಂತರದ ದಿನಗಳಲ್ಲಿ ಬಂದಂತಹ ದಾಸರು, ಕೀರ್ತನಾಕಾರರು ಸಹ ಜಾತಿ ವ್ಯವಸ್ಥೆಯನ್ನು ಖಂಡಿಸಿದ್ದಾರೆ. ಕೆಳಜಾತಿಯಲ್ಲಿ ಜನಿಸಿ ನೊಂದ ಕನಕದಾಸರು ಈ ರೀತಿಯಾಗಿ ಹೇಳುತ್ತಾರೆ.

ಕುಲ ಕುಲ ಕುಲವೆಂದು ಹೊಡದಾಡದಿರಿ

ನಿಮ್ಮ ಕುಲದ ನೆಲೆಯೇನನ್ನಾದರೂ ಬಲ್ಲಿರಾ

ಎಂದು ಇಡೀ ವ್ಯವಸ್ಥೆಯನ್ನು ಪ್ರಶ್ನಿಸುವ ಮೂಲಕ ಕನಕದಾಸರು ಜಾತೀಯತೆಯ ಆಚರಣೆಯನ್ನು ತಿರಸ್ಕರಿಸುತ್ತಾರೆ.

ಇದುವರೆಗೂ ವಿವರಿಸಿದ್ದೆಲ್ಲವೂ ಪ್ರಾಚೀನ ಕಾಲಕ್ಕೆ ಸಂಬಂಧಿಸಿದಂತೆ ಆದರೆ ಅರ್ವಾಚೀನ ಕಾಲದಲ್ಲಿ ಜಾತಿಯ ಆಚರಣೆ ಹೇಗಿದೆ, ಸಾಹಿತ್ಯ ಕೃತಿಗಳು ಅದರ ಬಗ್ಗೆ ಏನು ಹೇಳುತ್ತವೆ ಎಂಬುದನ್ನು ಗಮನಿಸಿದಾಗ ಆಧುನಿಕ ಕಾಲದ ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಸಾಹಿತ್ಯದ ವಿವಿಧ ಘಟ್ಟಗಳಲ್ಲಿಯೂ ಜಾತಿಯದೇ ಕಾರುಬಾರು. ಅದು ಆ ವ್ಯವಸ್ಥೆಯೊಳಗಿದ್ದು ಅದರಿಂದ ನೊಂದು ಬೇಸತ್ತು ಹುಟ್ಟಿದ ವ್ಯಕ್ತಿಯಿಂದ ಇರಬಹುದು. ಅಥವಾ ದೂರದಿಂದ ನಿಂತು ನೋಡಿ ಅದರಿಂದ ಪ್ರಭಾವಿತರಾದ ಲೇಖಕರಿರಬಹುದು. ಇಬ್ಬರೂ ಸಹ ಸಾಹಿತ್ಯದಲ್ಲಿ ಜಾತೀಯತೆಯ ಪ್ರಸ್ತಾಪ ಮಾಡಿರುವುದನ್ನು ಗಮನಿಸಬಹುದು.

ನವೋದಯ ಕಾಲದಲ್ಲಿ ಬಂದ ಕವಿಗಳೆಲ್ಲರೂ ಬ್ರಾಹ್ಮಣ ವರ್ಗಕ್ಕೆ ಸೇರಿದವರಾದ್ದರಿಂದ ಅವರು ಜಾತೀಯತೆಯ ವಿರುದ್ಧ ತಿರುಗಿದುದು ಕಡಿಮೆಯೇ. ಹಾಗಾಗಿ ನಾವು ಆ ಕಾಲಘಟ್ಟದಲ್ಲಿ

ಕುವೆಂಪು ಅವರ ಬರವಣಿಗೆ, ಅದರಲ್ಲೂ ಅವರ ಎರಡು ಬೃಹತ್ ಕಾದಂಬರಿಗಳಲ್ಲಿ ಈ ಜಾತೀಯತೆಯ ಚಿತ್ರಣವನ್ನು ನೈಜವಾಗಿ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಕುವೆಂಪು ನಂತರದ ಕಾದಂಬರಿಕಾರರಲ್ಲಿ ಶಿವರಾಮಕಾರಂತರು ತಮ್ಮ ಕಾದಂಬರಿಗಳಲ್ಲಿ ಸಾಮಾಜಿಕ ಅನ್ಯಾಯಗಳ ವಿರುದ್ಧ ಭಾರತದಲ್ಲಿಯೇ ಮೊಟ್ಟಮೊದಲ ಬಾರಿಗೆ ದನಿಯೆತ್ತಿದ ಕಾದಂಬರಿಯೆಂದರೆ ಚೋಮನ ದುಡಿ. ಬರೆದು ಆರು ದಶಕಗಳು ಕಳೆದರೂ ಇಂದಿಗೂ ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡಿರುವ ಕಾದಂಬರಿಯೆಂಬ ಹೆಗ್ಗಳಿಕೆಗೆ ಪಾತ್ರವಾದ ಕಾದಂಬರಿ ಕನ್ನಡ ಸಾಹಿತ್ಯದಲ್ಲಿ ಒಂದು ರೀತಿ ಚೋಮ ಕಾಂಪ್ಲೆಕ್ಸ್ ಸೃಷ್ಟಿ ಮಾಡಿದ ಕಾದಂಬರಿ.

ಇದೇ ರೀತಿ ಪಾಶ್ಚಾತ್ಯರ ವಿಚಾರಧಾರೆಯಿಂದ ಪ್ರಭಾವಿತರಾದ ನವ್ಯರು ಪಾಶ್ಚಾತ್ಯ ಶಿಕ್ಷಣ ಪಡೆದು ಭಾರತಕ್ಕೆ ಬಂದ ವಿಚಾರವಂತರು ಆಧುನಿಕರು ಭಾರತೀಯ ಸಮಾಜದಲ್ಲೇ ಜಡ್ಡುಗಟ್ಟಿ ನಾರುತ್ತಿರುವ ಸಾಮಾಜಿಕ ಪಿಡುಗಾದ ಜಾತಿಯ ವ್ಯವಸ್ಥೆಯ ವಿರುದ್ಧ ಉಗ್ರವಾದ ಹೋರಾಟಕ್ಕೆ ಇಳಿದವರು ನವ್ಯರು. ಅದರಲ್ಲೂ ಅನಂತಮೂರ್ತಿಯವರು ಬ್ರಾಹ್ಮಣ ವರ್ಗದಲ್ಲಿ ಜನಿಸಿದರು. ಅಲ್ಲಿ ಜೀವವಿರೋಧಿಯಾದ ಬ್ರಾಹ್ಮಣ್ಯವನ್ನು ವಿರೋಧಿಸತೊಡಗಿದರು. ಬ್ರಾಹ್ಮಣರಲ್ಲಿ ಮಡಿ ಮೈಲಿಗೆಯ ಪರಿಕಲ್ಪನೆ ಶ್ರಾದ್ಧ, ಮದುವೆ ಮೊದಲಾದ ಸಂಸ್ಕಾರಗಳನ್ನು ಸ್ಪರ್ಶ ಅಸ್ಪೃಶ್ಯವನ್ನು ಧಿಕ್ಕರಿಸುವ ಪರಂಪರೆಯನ್ನು ವಿರೋಧಿಸುವ, ಅಂತರ್ಜಾತೀಯ ವಿವಾಹವನ್ನು ಬೆಂಬಲಿಸುವ ಕಥೆ ಕಾದಂಬರಿಗಳನ್ನು ಬರೆಯತೊಡಗಿದರು.

ಜಾತಿ ಸಂಘರ್ಷದಿಂದ ಕೇವಲ ಕೆಳ ಜಾತಿಯ ಜನರು ಮಾತ್ರ ನೋವು ಸಂಕಟಗಳನ್ನು, ಅನುಭವಿಸುತ್ತಾರೆಂದು ಹೇಳಿದರೆ ತಪ್ಪಾಗುತ್ತದೆ. ಈ ಬಗೆಯ ಒಡೆದು ಆಳುವ ಅಘೋಷಿತ ಸಾಂಪ್ರದಾಯಿಕ ಕರ್ಮಠ ವ್ಯವಸ್ಥೆಯು ಇಡೀ ಸಾಮಾಜಿಕ ವ್ಯವಸ್ಥೆಯನ್ನು ರೋಗಗ್ರಸ್ಥವಾಗಿಸುತ್ತದೆ. ಇಂತಲ್ಲಿ ಈ ಜಾತಿ ವ್ಯವಸ್ಥೆಯ ಮೇಲು ಕೀಳಗಳನ್ನು ಹೆಣ್ಣು ಮತ್ತು ಗಂಡುಗಳಿಗೂ ಅನ್ವಯಿಸಬಹುದಾಗಿದೆ. ಪುರುಷಜಾತಿಯ ಅನುಕೂಲಸಿಂಧು ಮನಸ್ಥಿತಿಗೆ ಅದೇ ಜಾತಿಯ ಹೆಣ್ಣು ಕುಲವೂ ಶೋಷಣೆಗೆ ಒಳಗಾಗಬೇಕಾದ ಅನಿವಾರ್ಯತೆ ಕೂಡ ಏರ್ಪಡುತ್ತದೆ. ಇದಕ್ಕೆ ಉತ್ತಮ ನಿದರ್ಶನವನ್ನಾಗಿ ರುಕ್ಮಿಣಿಯನ್ನು ಹೆಸರಿಸಬಹುದು. ಹೀಗೆ ಜಾತಿ ಸಂಘರ್ಷವು ಸಮುದಾಯಗಳ ನಡುವಿನ ಅಸಮಾನತೆಯ ವಿರುದ್ಧ ನಡೆದರೆ, ಹೆಣ್ಣು ಗಂಡಿನ ನಡುವಿನ ಸಂಘರ್ಷವು ಸಹ ಅಸಮಾನ ಮಾನವೀಯ ಸಂಬಂಧಗಳ ನೆಲೆಯಲ್ಲಿ ನಡೆಯುವ ಸಂಘರ್ಷವಾಗಿದೆ. ಸ್ವರೂಪದಲ್ಲಿ ಇವೆರಡೂ ಬೇರೆ ಬೇರೆ ಅನಿಸಿದರೂ ಅಸಮಾನತೆಯ ವಿರುದ್ಧದ ಸಂಘರ್ಷವೆಂಬುದನ್ನು ಗಮನಿಸಬಹುದಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಜಾತಿಯ ವ್ಯವಸ್ಥೆ ಹಿಂದಿನಷ್ಟು ಕ್ರೂರವಾಗಿಲ್ಲದಿದ್ದರೂ ಅದರ ಪ್ರಭಾವವಿನ್ನೂ ಕಡಿಮೆಯಾಗಿಲ್ಲ. ಇಂದು ಮನುಷ್ಯ ವೈಜ್ಞಾನಿಕವಾಗಿ, ಶೈಕ್ಷಣಿಕವಾಗಿ ಪ್ರತಿಯೊಂದು

ಕ್ಷೇತ್ರದಲ್ಲೂ ಪ್ರಗತಿಯ ದಾಪುಗಾಲು ಹಾಕುತ್ತಿದ್ದಾನೆ. ಆದರೂ ನಮಗೆ ಜಾತಿ ವ್ಯವಸ್ಥೆಯ ಮುಷ್ಠಿಯಿಂದ ಬಿಡಿಸಿಕೊಳ್ಳಲಾಗಿಲ್ಲ. ಭಾರತೀಯ ಸಮಾಜದಲ್ಲಿ ಕೆಳ ವರ್ಗಕ್ಕೆ ಸೇರಿದ ಜನರೇ ನೂರಾರು ವರ್ಷಗಳಿಂದ ಒಂದಲ್ಲ ಒಂದು ರೀತಿಯಲ್ಲಿ ಉಗ್ರ ಶೋಷಣೆಗೆ ಗುರಿಯಾಗುತ್ತಲೇ ಬಂದಿದ್ದಾರೆ. ಈ ಸಮಸ್ಯೆ ಕೇವಲ ಅನಂತಮೂರ್ತಿಯವರ ಕಾಲಕ್ಕೆ ಮಾತ್ರ ಸೀಮಿತಿವಾಗಿಲ್ಲ. ಪ್ರಸ್ತುತದಲ್ಲಿಯೂ ಪ್ರತಿ ದಿನವೂ ಈ ಜಾತಿ ಮತ್ತು ವರ್ಗದ ಕಾರಣದಿಂದ ಮನುಷ್ಯ ಸ್ವತಂತ್ರವಾಗಿ ಜೀವಿಸಲು ಆಗುತ್ತಿಲ್ಲ. ಒಂದು ಕಡೆ ಆಳುವ ಸರ್ಕಾರದಿಂದ ಏನೇ ಸೌಲಭ್ಯ, ಸವಲತ್ತು, ಸೌಕರ್ಯಗಳನ್ನು ಪಡೆಯಬೇಕಾದರೆ ಅಲ್ಲಿ ಜಾತಿಯ ಹಣೆಪಟ್ಟಿ ಅಂಟಿಕೊಂಡಿಸರಲೇ ಬೇಕು. ಶಿಕ್ಷಣ ಸಂಸ್ಥೆಗಳು ವಿಶ್ವವಿದ್ಯಾಲಯಗಳು ಸಹ ಇಂದು ಜಾತಿಯ ಆಧಾರದ ಮೇಲೆ, ಧರ್ಮದ ಆಧಾರದ ಮೇಲೆ ಪ್ರವೇಶವನ್ನು ಉದ್ಯೋಗವನ್ನು ಕೊಡುತ್ತಿರುವುದು ಬೇಲಿಯೇ ಎದ್ದು ಹೊಲ ಮೇಯುವಂತಾಗಿದೆ. ಏಕೆಂದರೆ ಜಾತಿಯನ್ನು ಹೊಡೆದೋಡಿಸುವ ಶಕ್ತಿಯಿರುವುದು ಶಿಕ್ಷಣಕ್ಕೆ ಮಾತ್ರ. ಆ ಶಿಕ್ಷಣವೇ ಇಂದು ವ್ಯಾಪಾರೀಕರಣ ಪ್ರಕ್ರಿಯೆಗೆ ಒಳಗಾಗಿ ಜಾತಿಯ ಉತ್ತರಾಧಿಕಾರಿಯಂತೆ ವರ್ತಿಸುತ್ತಿರುವುದು ನಿಜಕ್ಕೂ ನಮ್ಮ ದುರ್ದೈವವೇ ಸರಿ. ವರ್ಗ ತಾರತಮ್ಯದಿಂದ ಮನುಷ್ಯ ಅಷ್ಟೇ ಪ್ರಮಾಣದ ಸಂಕಷ್ಟಕ್ಕೆ ಸಿಲುಕಿದ್ದಾನೆ. ಸಮಾಜದಲ್ಲಿ ಸಂಘರ್ಷವೇರ್ಪಟ್ಟರೆ ಅದು ಸಮಾಜದ ವಿನಾಶದ ಸಂಕೇತವೇ ಹೊರೆತು ಮತ್ತೇನೂ ಅಲ್ಲ. ಬಡವ ಸಿರಿವಂತರ ನಡುವೆ ಅಂತರ ಕಡಿಮೆಯಾಗಬೇಕು. ಉಳ್ಳವರು ಇಲ್ಲದವರನ್ನು ಪೋಷಿಸುವ ಆಶ್ರಯಧಾತರಾಗಬೇಕು. ಆಗಿಲ್ಲದಿದ್ದರೆ ಅಧಿಕ ಸಂಖ್ಯೆಯಲ್ಲಿರುವ ಇಲ್ಲದವರು ಅಲ್ಪಸಂಖ್ಯಾತರಾದ ಉಳ್ಳವರನ್ನು ನಾಶ ಮಾಡುವ ಕಾಲ ಹೆಚ್ಚು ದಿನವಿಲ್ಲ. ಹೊಟ್ಟೆ ಬಟ್ಟೆಗಳಿಗೆ ಕಡಿಮೆಯಾದ ಮನುಷ್ಯ ಮೃಗದಂತೆ ಇಡೀ ವ್ಯವಸ್ಥೆಯನ್ನು ನಾಶಗೊಳಿಸುತ್ತಾನೆ ಎಂದು ಹೇಳುವ ಡಿ. ಆರ್. ನಾಗರಾಜ್ ಅವರ ಮಾತು ಮನನಯೋಗ್ಯ.

ಈ ಮೊದಲೇ ವಿವರಿಸಿರುವಂತೆ ವೈಶಾಖ ಕಾದಂಬರಿಯು ಗ್ರಾಮೀಣ ಬದುಕಿನ ಸಮೃದ್ಧ ವಿವರಗಳನ್ನು ಒಳಗೊಂಡಿದೆ. ಇದಕ್ಕೆ ತಕ್ಕಂತೆ ಕೃತಿಯ ಭಾಷೆಯೂ ಸಹ ಜನಪದ ನುಡಿಗಟ್ಟುಗಳು, ಒಗಟುಗಳನ್ನೊಳಗೊಂಡಂತೆ ವಿಶಿಷ್ಟ ಆಡುನುಡಿಯನ್ನು ಸಮರ್ಪಕವಾಗಿ ಬಳಸಿಕೊಂಡಿದೆ. ಸಮಾಜದ ಮೇಲು ಮತ್ತು ಕೆಳ ಸ್ತರಗಳ ವ್ಯಕ್ತಿಗಳಿಗೆ ತಕ್ಕಂತೆ ಭಾಷಾ ಬಳಕೆಯಲ್ಲಿಯೂ ಬದಲಾವಣೆ ಕಂಡು ಬರುತ್ತದೆ. ಈ ಬದಲಾವಣೆಯು ಸಾಮಾಜಿಕ ಸ್ತರಗಳ ಸೂಚಕವೂ ಆಗಿರುವುದರಿಂದ ಇದನ್ನು ಮೆಲಿಂದ ಮೇಲೆ ಪ್ರಸ್ತಾಪಿಸಬೇಕಾಗುತ್ತದೆ. ಉನ್ನತ ವರ್ಗದ ಬ್ರಾಹ್ಮಣರ ಭಾಷೆಯು ಬಹುತೇಕ ಗ್ರಂಥಸ್ಥದ ರೀತಿಯಲ್ಲಿರುವುದರಿಂದ ಅದರ ಏಕತಾನತೆಯು ಸಹಜವಾಗಿಯೇ ಬೇಸರ ಹುಟ್ಟಿಸುತ್ತದೆ. ಆದರೆ ಇದಕ್ಕೆ ಪ್ರತಿಯಾಗಿ ಕೆಳವರ್ಗದ ಪಾತ್ರಗಳ ಸಂಭಾಷಣೆ ಮತ್ತು ನಿರೂಪಣೆಯು ಲವಲವಿಕೆಯಿಂದ ಕೂಡಿರುತ್ತದೆ. ಮೂಲ ಜನಪದದ

ಬನಿಯನ್ನು ಒಳಗೊಂಡು ಜೀವನ ಪ್ರೀತಿಯನ್ನು ಅಭಿವ್ಯಕ್ತಿಸುವ ಭಾಷೆ ಸಹಜವಾಗಿಯೇ ಶಕ್ತಿಶಾಲಿಯಾಗಿರುತ್ತದೆ. ಮನು ಪ್ರಣೀತ ಸಾಮಾಜಿಕ ವ್ಯವಸ್ಥೆಯು ಕೃತಕವಾದುದರಿಂದ ಮತ್ತು ಪೊಳ್ಳು ಜೀವನಪ್ರೀತಿಯನ್ನು ವ್ಯಕ್ತಪಡಿಸುವುದರಿಂದಾಗಿ ಅದನ್ನು ಪ್ರತಿನಿಧಿಸುವ ಭಾಷೆಯೂ ಸಹ ಅಷ್ಟೇ ಕೃತಕವಾಗಿರುತ್ತದೆ. ಬಹುಷ ವೈಶಾಖ ಕಾದಂಬರಿಯಲ್ಲಿ ಭಾಷಾ ಪ್ರಯೋಗದ ಕುರಿತು ಪ್ರತ್ಯೇಕ ಭಾಷಿಕ ಅಧ್ಯಯನವನ್ನೇ ಮಾಡಬಹುದಾಗಿದೆ.

ಈ ಬಗೆಯಲ್ಲಿ ಭಾರತದ ಸಂಕ್ರಮಣ ಸ್ಥಿತಿಯಲ್ಲಿರುವ ಗ್ರಾಮೀಣ ವ್ಯವಸ್ಥೆಯ ಪ್ರತೀಕವಾದ ದರುಮನಹಳ್ಳಿಯ ಸಾಮಾಜಿಕ ಆಯಾಮಗಳನ್ನು ವಿಶ್ಲೇಷಿಸುವಾಗ ಭಾಷೆಯೂ ಒಂದು ಉಪಕರಣವಾಗುತ್ತದೆ. ಸಾಮಾಜಿಕ ಏಣಿ ಶ್ರೇಣಿಗಳನ್ನು ಭಾಷೆಯಷ್ಟು ಸಮರ್ಪಕವಾಗಿ (ಅಂದರೆ ಆಡುನುಡಿ) ಬೇರಾವುದೂ ಬಿಚ್ಚಿಡಲಾರದು. ಅಂತೆಯೇ ಈ ಭಾಷೆಯ ಮೂಲಕ ರೂಪು ತಳೆದ ಪಾತ್ರ ಚಿತ್ರಣ ಸಹ ಇಂತಹ ವರ್ಗ, ವರ್ಣ, ಸಾಮಾಜಿಕ ವೈರುಧ್ಯಗಳನ್ನು ಸ್ಪಷ್ಟ ಪಡಿಸುತ್ತದೆ. ಇಲ್ಲಿ ಕೆಳವರ್ಗವನ್ನು ಪ್ರತಿನಿಧಿಸುವ ಲಕ್ಕ ಪ್ರಧಾನ ಪಾತ್ರಧಾರಿಯಾದರೂ ಲಕ್ಕನೊಂದಿಗೆ ಕಾಣಿಸಿಕೊಳ್ಳುವ ಹಲವಾರು ದಲಿತ ಪಾತ್ರಗಳು ಸಹ ಜೀವಂತವಾಗಿ ಮೂಡಿ ಬಂದಿವೆ. ಇದಕ್ಕೆ ಸಂಬಂಧಿಸಿದಂತೆ ಡಾ. ಕೆ. ವಿ.ನಾರಾಯಣ ಅವರು ಈ ಕೆಳಗಿನಂತೆ ವಿವರಿಸುತ್ತಾರೆ.

"ಪಾತ್ರಗಳ ಮಾತನ್ನು ಆ ಸಾಮಾಜಿಕ ಉಪಭಾಷೆಯಲ್ಲಿ ದಾಖಲು ಮಾಡುವಾಗ ಈ ಸಮಸ್ಯೆ ಏಳುವುದಿಲ್ಲ. ಆ ಉಪಭಾಷೆಯ ಮೂಲಕವೇ ಆ ಪಾತ್ರಗಳ ಮನೋಜಗತ್ತನ್ನು ಮಂಡಿಸುವಾಗ ಶಿಷ್ಟ ಭಾಷೆಯ ವಾಕ್ಯಗಳ, ಪದರಚನೆಯ ಮಾರ್ಪಾಟುಗೊಂಡ (ಒಂದೇ ರೀತಿಯ ತದ್ಭವ) ಬಗೆಯನ್ನೇ ಓದುವ ಅನುಭವವಾಗುತ್ತದೆ. ಇದು ಎಲ್ಲಾ ಸಂದರ್ಭಗಳಲ್ಲಿಯೂ ಪ್ರಕಟವಾಗದಿದ್ದರೂ ಕಾದಂಬರಿಯ ಉದ್ದಕ್ಕೂ ಹಲವು ಇಂತಹ ಇಕ್ಕಟ್ಟುಗಳನ್ನು ಕಾಣಬಹುದು. ಈ ಸಾಮಾಜಿಕ ಉಪಭಾಷೆಯನ್ನು ಇಂಥ ನಿಯೋಗಕ್ಕೆ ಒಳಪಡಿಸುತ್ತಿರುವುದು ಇದೇ ಮೊದಲ ಬಾರಿಯಾಗಿರುವುದರಿಂದ ಈ ಇಕ್ಕಟ್ಟುಗಳು ಅಷ್ಟೇನೂ ಮಹತ್ವದ ದೋಷಗಳು ಎನಿಸುವುದಿಲ್ಲ. ಅಲ್ಲದೆ ಕನ್ನಡ ಸಾಹಿತ್ಯದಲ್ಲಿ ಶಿಷ್ಟ ಭಾಷಿಕ ಅಭಿವ್ಯಕ್ತಿ ಸಾಧ್ಯವಿಲ್ಲದ ಪಾತ್ರಗಳ ಪ್ರಜ್ಞಾವಿಕಾಸದ ಚಿತ್ರಣದಲ್ಲಿನ ಭಾಷಾ ಸಮಸ್ಯೆ ಇನ್ನೂ ರೂಪುಗೊಳ್ಳುವ ಹಂತದಲ್ಲೇ ಇದೆ. ನಮ್ಮ ಬರಹಗಾರರೆಲ್ಲಾ ಈ ಸಮಸ್ಯೆಯನ್ನು ಒಂದಿಲ್ಲೊಂದು ಬಗೆಯಲ್ಲಿ ಎದುರಿಸುತ್ತಲೇ ಇದ್ದಾರೆ.".[೧]

ಗ್ರಾಮೀಣ ಬದುಕೇ ವೈಶಾಖ ಕೃತಿಯ ಕೇಂದ್ರವಾಗಿದೆ. ಎರಡು ಭಿನ್ನ ಸ್ತರಗಳಲ್ಲಿ ಈ ಕೃತಿ ರೂಪು ತಳೆಯುತ್ತದೆ. ಜಾತಿ ಶ್ರೇಣೀಕರಣದಲ್ಲಿ ಉನ್ನತ ಸ್ಥಾನದಲ್ಲಿರುವ ಬ್ರಾಹ್ಮಣರ ಜೀವನ ವಿಧಾನವನ್ನು ದಾಖಲಿಸುವುದು ಒಂದು ಸ್ತರವಾದರೆ, ಮತ್ತೊಂದು ಸ್ತರ ಶೋಷಿತ ಜಗತ್ತಿನ ಇನ್ನೊಂದು ಕೊನೆಯಾದ ದಲಿತರ ಬದುಕಿನ ವಿಧಾನವನ್ನು ದಾಖಲಿಸುವುದು ಮತ್ತೊಂದು

ಸ್ತರ. ಹೀಗೆ ದರುಮನಹಳ್ಳಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಗ್ರಾಮೀಣ ಜಗತ್ತಿನ ಭಿನ್ನ ಜೀವನ ಕ್ರಮಗಳನ್ನು ಭಾಷಾ ವೈವೈವಿಧ್ಯತೆಯೊಂದಿಗೆ ದಾಖಲಿಸುವ ವಿಶಿಷ್ಟ ಬಗೆಯ ಪ್ರಯೋಗವಾಗಿದೆ ವೈಶಾಖ. ಇಂತಲ್ಲಿ ಸಹಜವಾಗಿ ಬದುಕಿಗೆ ಹತ್ತಿರವಾಗುವ, ನಿಸರ್ಗಕ್ಕೆ ಹತ್ತಿರವಾಗಿರುವ, ಸಹಜತೆಯನ್ನೇ ಉಸಿರಾಡುವ ದಲಿತರ ಬದುಕನ್ನು ಚಿತ್ರಿಸುವಾಗ ಭಾಷೆ ಅಧ್ಭುತವಾದ ಧ್ವನಿರಮ್ಯತೆಯನ್ನು ಪಡೆದುಕೊಳ್ಳುತ್ತದೆ. ವಿಶಿಷ್ಟ ಬಗೆಯ ಉಜ್ವಲತೆಯನ್ನು ಪಡೆದುಕೊಳ್ಳುತ್ತದೆ. ಇದಕ್ಕೆ ಭಿನ್ನವಾಗಿ ಮೇಲುಜಾತಿಯ ಅದರಲ್ಲೂ ಬ್ರಾಹ್ಮಣರ ಜೀವನದ ವಿರಗಳನ್ನು ದಾಖಲಿಸುವಾಗ ಭಾಷೆ ಸಹಜವಾಗಿಯೇ ಪೇಲವವಾಗುತ್ತದೆ. ಸಾಮಾಜಿಕವಾಗಿ ಮೇಲಸ್ತರದಲ್ಲಿರುವವರಿಂದ ಕೆಳಸ್ತರದ ಸಮುದಾಯದವರ ಮೇಲೆ ನಡೆಯುವ ಶೋಷಣೆ ಕೇವಲ ಆರ್ಥಿಕ ಪರವಾದದ್ದು ಮಾತ್ರವೇ ಅಲ್ಲದೆ ಮಾನಸಿಕವಾಗಿಯೂ ಆಘಾತಕಾರಿಯಾಗುವಂತಹ ಸಂಗತಿಗಳಿಂದ ಕೂಡಿರುತ್ತದೆ ಎನ್ನುವುದಕ್ಕೆ ನಂಜೇಗೌಡ ಮಠದಲ್ಲಿ ನಡೆಸುವ ಅನಿತೀಯ ವ್ಯವಹಾರಗಳನ್ನೇ ಉದಾಹರಿಸಬಹುದು. ಕೆಳಸ್ತರದ ಸಮುದಾಯಗಳಿಗೆ ಧಾರ್ಮಿಕ ಕಟ್ಟುಕಟ್ಟಳೆಗಳ ಮೂಲಕ ನಿರ್ಬಂಧಿಸುವ ಮಠಮಾನ್ಯಗಳು ಅನೀತಿಯ ಆಗರಗಳಾಗುವುದು ಮತ್ತು ಅದಕ್ಕೆ ಪೂರಕವಾಗಿ ಅದೇ ಕೆಳವರ್ಗದ ವ್ಯಕ್ತಿಗಳನ್ನು ಸಹಾಯಕ್ಕಾಗಿ ಬಳಸಿಕೊಳ್ಳುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಲಕ್ಕನಿಗೆ ಇಷ್ಟವಿಲ್ಲದಿದ್ದಾಗ್ಯೂ ನಂಜೇಗೌಡ ಪವಿತ್ರವಾದ ಮಠದಲ್ಲಿ ಶಿವಪಾದಪ್ಪನವರ ಹೆಸರು ಬಳಸಿಕೊಂಡು ಕುಡಿತಕ್ಕೆ ಬೇಕಾದ ಬಾಟಲುಗಳನ್ನು ಲಕ್ಕನ ಮೂಲಕ ತರಿಸಿಕೊಳ್ಳಲಾಗುತ್ತದೆ. ಲಕ್ಕನ ಮನಸ್ಸು ಈ ಕೆಲಸಕ್ಕೆ ಸುತಾರಾಂ ಒಪ್ಪುವುದಿಲ್ಲ. ಆದರೆ ಪರಿಸ್ಥಿತಿಯ ಒತ್ತಡಗಳಿಗೆ ಸಿಲುಕಿಯೂ ತಮ್ಮ ಅಸ್ತಿತ್ವವು ಮೇಲ್ವರ್ಗವನ್ನು ಆಧರಿಸಿಯೇ ನಿಂತಿರುವುದರಿಂದ ಅಸಹಾಯಕನಾದ ಲಕ್ಕ ಈ ಕೆಲಸಕ್ಕೆ ಒಪ್ಪಿಕೊಳ್ಳಬೇಕಾಗುತ್ತದೆ.

ಇಂತಹ ಅದೆಷ್ಟೋ ಸಂದರ್ಭಗಳಲ್ಲಿ ಭಾಗಿಯಾದರೂ ಲಕ್ಕ ನೈತಿಕವಾಗಿ ಮೇಲ್ಮಟ್ಟದಲ್ಲೇ ಇರುತ್ತಾನೆ. ಅವನು ತನಗೆ ಇಷ್ಟವಿಲ್ಲದ ಕೆಲಸದಲ್ಲಿ ಭಾಗಿಯಾದಾಗ್ಯೂ ಮನಸ್ಸು ಮಾತ್ರ ಪರಿಶುದ್ಧವಾಗಿರುತ್ತದೆ. ನಂಜೇಗೌಡ ಮತ್ತು ಮಠದ ಪರಿಸರದ ವ್ಯಕ್ತಿಗಳಂತೆ ಮಾನಸಿಕವಾಗಿ ಲಕ್ಕ ಭ್ರಷ್ಟನಾಗಿರುವುದಿಲ್ಲ. ರುಕ್ಮಿಣಿಯ ಲೈಂಗಿಕ ಆಕ್ರಮಣದ ಸಂದರ್ಭದಲ್ಲೂ ಲಕ್ಕ ತನ್ನ ಆತ್ಮಶುದ್ಧಿಯನ್ನು ಕಳೆದುಕೊಳ್ಳಲಾರ. ಇಲ್ಲಿಯೂ ಲಕ್ಕ ಲಕ್ಕನಾಗಿಯೇ ಉಳಿದುಕೊಳ್ಳುತ್ತಾನೆ. ನಂಜೇಗೌಡ ಲಕ್ಕನಿಗೆ ಮಠದಲ್ಲಿ ನಡೆಯುವ ಪಾನಗೋಷ್ಠಿಗಾಗಿ ಬಾಟಲ್‌ಗಳನ್ನು ತರಿಸಲು ಪ್ರಯತ್ನಿಸುವಾಗಿನ ಲಕ್ಕನ ಮನಸ್ಥಿತಿಯನ್ನು ಲೇಖಕರು ಈ ರೀತಿಯಲ್ಲಿ ಚಿತ್ರಿಸಿದ್ದಾರೆ.

> ಒಂದು ರಾತ್ರಿನಾಗ ಇದೇ ಜಪ್ಪಯ್ಯನ ಮಠದ ಮುಂಚೋರಿ
> ಲಕ್ಕ ವೋಯ್ತಾ ಇದ್ದ. ಇದೇ ನಂಜೇಗೌಡ ಎಲಡಕೆ ವೊಗೆಸೊಪ್ಪ
> ಜಗೀತ ಮಠದ ಮುಂದೆ ಒಬ್ಬಾನೊಬ್ನೆ ಗಸ್ತಾಕ್ತಾ ಇದ್ದ. ಲಕ್ಕ

ಕಣ್ಣಿಗೆ ಬಿದ್ದನೋ ಇಲ್ಲೋ, ಬಾ ಅಂದ. ಲಕ್ಕ ವೋದ. ನಿನ್ನಯ್ಯ ಕುಡೀತಾನೆ ಅಲ್ಲವೇನ್ಲ ಕೇಳ್ದ ಗೌಡ. ಇದ್ಯಾಕಪ್ಪ ಇಂಗೆ ಕೇಳ್ತಾನೆ ಎದರಿಕಂಡು ಎದರಿಕಂಡೆ, ಔದು ಗೌಡ್ರೇ... ತೊದಲಾಗ, ನೀನು ಕೇಳ್ದ. ಇಲ್ಲ ಗೌಡ್ರೆ ತಲೆ ಕೆರೀತ ನಿಂತ.

ಬಾ ಇಲ್ಲಿ

ಒಂದು ಬೆಳ್ಳಿ ರೂಪಾಯ ಕಯ್ಯಾಗಿಟ್ಟು,

ವೋಗು ಸಂತೋಸ್ವಾಗಿ ನೀನೂ ಕುಡಿವೋಗು ಅಂದ.

ನಂಗೆ ಬ್ಯಾಡಿ ಗೌಡ್ರೆ ನಂಗಿದು ಬ್ಯಾಡಿ ಗ್ಯಾಗರಿದ್ರೂವೆ ರೂಪಾಯ ಹಿಂದ್ಕೆ ಈಸುಕೊಳನೇ ಇಲ್ಲ.

ಸರಿ, ದೂರದಿಂದೆ ಕಯ್ಯಿ ಮುಗುದು,

ಈ ಪಟ್ಟು ವೋಗಿ ಬತ್ತೀನಿ ಅಂತಿದ್ದಂಗೇಯ

ಉಂಟ ಉಂಟ ಉಣ್ಣದೆ ವೋಗೋದ. ಅಡಿಗೆ ಮಾದಮ್ನ ಕರೆದು ಇವ್ನಿಗೆ ಉಣ್ಣಕೆ ಇಡು ಅಂದ.

ಮಲ್ಲಿಗೆ ಊವನಂಗಿದ್ದ ಬೋನ ಉಂಡು ಬೋಜಿನ ಆಗಿತ್ತು. ಗಡದ್ದಾಗಿ ವೊಡ್ದ ಲಕ್ಕ. ಅವ್ನ ಬೊಡ್ಡಂಗೂ ಅವತ್ತು ಮುಸ್ಸಾನ್ನ.

ಉಂಡು ಬಂದ ಗೌಡ, ಸನ್ನೆ ಮಾಡಿ ಗುಟ್ಟಾಗಿ ತನ್ನತ್ತಿರ್ಕೆ ಕರುದ.

ನಂಗೊಂದು ಕೆಲ್ಸ ಮಾಡಿಕ್ವಡಬೇಕಲ್ಲೋ ಲಕ್ಕ ಮೆತ್ತಮೆತ್ತಗಂದ.

ಅದೇನು ಗೌಡ್ರೆ ಯೋಳಿ ಅಂತಿದ್ದಂಗೇಯ

ನ್ಯಾಡೋ ಲಕ್ಕ, ನಮ್ಮ ಮಠದ ಅಯ್ಯನೋರ ಮಯ್ಯಿಗೆ ರವೋಟು ಚೆಂದಾಗಿಲ್ಲ. ನೀ ವೋಗಿ ಅವರ್ಗೆ ಔಸ್ದ ತಕ್ಕಬಂದು ಕ್ವಡಬೇಕಲ್ಲ.

ಅದ್ಕೇನ ಆಗ್ಲಿ ಅಂದ.

ನ್ಯಾಡು, ಈಗ ನೀನು ಮಾರಿಗುಡಿಗೆ ವೋದ್ರೆ, ಅಲ್ಲಿ ಬೈಲಿಗ ರಂಗ, ರಾಚೇವಾರದ ಕಾಳೂರ, ರುದ್ರ, ಕೊಪ್ಪಲು ಚೆನ್ನ,

ಗುರುಮಲ್ಲು ಇವ್ರೆಲ್ಲ ಇರ್‍ತಾರೆ. ಅವರ ಸಂಗಾಟ ಜಪ್ಪಯ್ಯನ ಮಠದಯ್ಯನವರಿಗೆ ಔಸ್ದ ಬೇಕಂತೆ. ಗೌಡ್ರು ಯೋಳಿಕಳಿಸಿದ್ರು ಅನ್ನು ತಂದುಕ್ಕಡ್ತಾರೆ. ಇಲ್ಲಿಗೆ ಗುಟ್ಟಾಗಿ ತಕ್ಕಂಬಾ...

ಆಗ್ಲಿ ಅದು ಲಕ್ಕ ಮಾರೀಗುಡಿಗೋದ. ಇನ್ನೂ ವಳೀಕೆ ಕಾಲಿದ್ನಿಲ್ಲ. ಯಾರೊ ಅಂದ್ರು.

ವೊಟ್ಟೆ ತುಂಬ ಅಂಬಳಿ
ಮೈತುಂಬ ಕಂಬಳಿ
ಅನ್ನಬಟ್ಟೆ ಆಸ್ತಿ
ಮಿಕ್ಕಿದ್ದೆಲ್ಲ ಜಾಸ್ತಿ

ವೈಶಾಖ ಕಾದಂಬರಿಯು ಸಾಮಾಜಿಕ ಸಂಬಂಧಗಳ ಗ್ರಹಿಕೆಯನ್ನು ಎರಡು ರೀತಿಯಲ್ಲಿ ಒಳಗೊಳ್ಳುವುದನ್ನು ಕಾಣುತ್ತೇವೆ. ಒಂದು ಜಾತಿ ಮತ್ತು ಆರ್ಥಿಕ ಸ್ಥಿತಿಯ ಮೂಲಕ ಒಡೆದಿರುವ, ಶ್ರೇಣೀಕರಣಗೊಂಡ ಸಮಾಜದಲ್ಲಿನ ಸಂಬಂಧಗಳು ಮತ್ತು ಇನ್ನೊಂದು ಶ್ರೇಣೀಕರಣಕ್ಕೆ ಒಳಪಡದ ಅಂದರೆ ಅದರಿಂದ ಪರಿಣಾಮಗೊಳ್ಳದ ಸಂಬಂಧಗಳು. ಮೊದಲಿನ ರೀತಿಯ ಸಂಬಂಧಗಳು ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿನ ಸಂಬಧಗಳಾದರೂ ಎರಡನೆಯ ರೀತಿಯ ಸಂಬಂಧಗಳು ನೈತಿಕ ಮತ್ತು ವೈಯಕ್ತಿಕ ನೆಲೆಯಲ್ಲಿ ಸಂಘಟಿಸುವ ಸಂಬಂಧಗಳಾಗಿವೆ. ಈ ಕಾದಂಬರಿಯಲ್ಲಿ ಮೂಡಿ ಬರುವ ಗಂಡು ಹೆಣ್ಣಿನ ಸಂಬಂಧಗಳು ಮತ್ತು ಒಂದೇ ಜಾತಿಯ, ಒಂದೇ ಮನೆತನದ ಜನರಲ್ಲಿ ಏರ್ಪಡುವ ಸಂಘರ್ಷಗಳು ಇಂತಹ ನೆಲೆಗಟ್ಟಿನಲ್ಲಿ ಸಂಘಟಿಸುವಂತವುಗಳಾಗಿವೆ. ವೈಶಾಖದ ಹೆಚ್ಚಳ ಇರುವುದು ಎಲ್ಲೆಂದರೆ, ಈ ಎರಡು ರೀತಿಯ ಸಂಬಂಧಗಳನ್ನು ಪರಸ್ಪರ ಬೇರ್ಪಡಿಸಿ ಸರಳೀಕರಣಕ್ಕೆ ಒಳಪಡಿಸುವುದೇ ಇವೆರಡೂ ರೀತಿಯ ಸಂಬಂಧಗಳು ಪರಸ್ಪರ ಸೇರಿಕೊಳ್ಳುತ್ತಾ ಇಡೀ ಸಮಾಜ ಒಂದು ಸಂಕೀರ್ಣ ಸ್ವರೂಪವನ್ನು ಪಡೆದುಕೊಂಡಿರುವುದನ್ನು ತೋರಿಸುವುದರಲ್ಲಿದೆ.

ಲಕ್ಕನ ಶಿಕ್ಷಣ ಮತ್ತು ಶಿಕ್ಷಣ ಪಡೆಯುವುದರ ಮೂಲಕ ಅವನು ಏರ್ಪಡಿಸಿಕೊಳ್ಳಬಹುದಾಗಿದ್ದ ವಿಶಿಷ್ಟ ಸಾಮಾಜಿಕ ಸಂಬಂಧ ಜಾತಿಯ ಶ್ರೇಣೀಕರಣದ ಹಿನ್ನೆಲೆಯಲ್ಲಿ ತಪ್ಪಿ ಹೋಗುವ ಚಿತ್ರವೊಂದು ಕಾದಂಬರಿಯಲ್ಲಿ ಬರುತ್ತದೆ. ಗೊರಗು ಹೊದ್ದು ಶಾಲೆಗೆ ಹೊರಟ ಲಕ್ಕನನ್ನು ಮಳೆಯಲ್ಲಿ ನೆನೆಯುತ್ತಿದ್ದ ಶಿವಾಚಾರದ ಗಂಗಿ ಬಂದು ಸೇರಿಕೊಂಡಾಗ.... ಅವಳು ನೆನೆಯುತ್ತಿದ್ದುದನ್ನು ಕಂಡು ನನಗೆ ಪಾಪ ಅನ್ನಿಸಿ ''ಇದ್ಯಾಕವ್ವಾ ಗೊರಗು ತರಬಾರದಾಗಿತ್ತಾ ಅಂತ ಕೇಳಿದ್ದೆ. ಅಯ್ಯೋ ನಮ್ಮಟ್ಟೀಲಿ ಇರಾದು ಒಂದೇ ಗೊರಗು.

ಇನ್ನೊಂದು ಯಾರೋ ಕದ್ಕೊಂಡೋದರಂತೆ. ನಿಂಗೊತ್ತಲ್ಲ ನಮ್ಮವ್ವಂಗೆ ಗೊರ್ನು. ಅದ್ಕೆ ನೀನೇ ತಕ್ಕೊಂಡೋಗು ಅಂದ್ಲು. ಅಂಗೇ ಬಂದೆ ಕಣೋ ಲಕ್ಕ" ಅಂದಿದ್ಲು ಗಂಗಿ. ಗಂಗಿ ಅಂದಿದ್ದೇ ತಡ ನಾನು ನನ್ನ ಗೊರಗು ತೆಗೆದು ಅಕ್ಕಳ್ಳಿ ಅಂತ ಕೊಡಾಕ ಹೋದರೆ ಬ್ಯಾಡ ಬ್ಯಾಡ ನೀನೊಬ್ಬನೇ ಯಾಕೆ ನೆನೀಬೇಕು... ತಾಳು ಇಬ್ರು ಸೇರಿದಂಗೆ ಇದ ವದ್ಕೊಳ್ಳಾವ ಅಂದು ಗಂಗಿ ತಲಿ ಮೇಲೆ ಗೊರಗು ಆಕ್ಯಂಡು ನನ್ನ ಅದರೊಳ್ಕೆ ಸೇರಿಸಿಕಂಡ್ಲು. ನಾ ಎಷ್ಟೋ ಪರೀಲಿ ಬ್ಯಾಡಿ ಬ್ಯಾಡಿ ಅಂದ್ರು ಆ ಹೆಣ್ಣು ಕೇಳನೇ ಇಲ್ಲ. ಸದ್ಯಕ್ಕೆ ಊರು ಅಗ್ಲೇ ಹಿಂದಕ್ಕಾಗಿತ್ತು... ಇದ್ಯಾಕ್ಲಾ ಅಪ್ಪಯ್ಯ ಹಿಂಗಾಡಿ. ಈಗ ಇಲ್ಲಾರಿದ್ದಾರು ಮಠ ಸಮೀಪಿಸ್ತಿದ್ದಂಗೆ ಆಚಿಗೆ ಜಿಗಿದು ಬಿಟ್ರೆ ಆಯ್ತಪ್ಪಾ ಅಂದ್ಲು ಗಂಗಿ...[೬] ಲಕ್ಕ ನೆನೆಯುತ್ತಿದ್ದ ಗಂಗಿಗೆ ತನ್ನ ಗೊರಗನ್ನು ಕೊಡ ಹೋಗುವುದರಲ್ಲಿ ಮಾನವೀಯ ಸಂಬಂಧದ ಜೊತೆ ಜಾತಿ ಮೂಲದ ಶ್ರೇಣೀಕರಣದ ಸಂಬಂಧವೂ ಇದೆ. ಅಂತಲೇ ಗಂಗಿ ಅದನ್ನು ಇಬ್ಬರೂ ಹೊದೆದುಕೊಳ್ಳಲು ಸೂಚಿಸಿದಾಗ ಅದನ್ನು ನಿರಾಕರಿಸುತ್ತಾನೆ. ಹಾಗೆಯೆ ಗಂಗಿ ಲಕ್ಕನ ಗೊರಗನ್ನು ಸ್ವೀಕರಿಸಿ ಅದನ್ನು ಇಬ್ಬರು ಹೊದೆದುಕೊಳ್ಳಬಹುದೆಂದು ಸೂಚಿಸುವಲ್ಲಿ ವೈಯಕ್ತಿಕ ನೈತಿಕತೆಯ ಮಾನವೀಯತೆಯ ಸಂಬಂಧಗಳಿರುವಂತೆ ಜಾತಿಯ ಶ್ರೇಷ್ಠತೆಯ ಸಂಬಂಧವೂ ಇದೆ. ಅಂತಲೇ ಅವಳು ಶಾಲೆ ಸಮೀಪಿಸುತ್ತಿದ್ದಂತೆ ತಾನು ಗೊರಗಿನಿಂದ ಹೊರಗೆ ಹೋಗುತ್ತೇನೆಂದು ಹೇಳದೆ ಗೊರಗಿನ ಮಾಲೀಕನಾದ ಲಕ್ಕನೇ ಹೊರಗೆ ಜಿಗಿಯಬೇಕೆಂದು ಸೂಚಿಸುತ್ತಾಳೆ. ಇದರೊಂದಿಗೆ, ಕೀಳು ಜಾತ್ಯೋರ ಹುಡುಗರನ್ನ ಶಾಲೆಯ ಒಳಗಡೆಗೆ ಮೇಲುಜಾತ್ಯೋರ ಹುಡುಗರ ಜೊತೆಗೆ ಕೂಡಿಸಿ ಪಾಠ ಹೇಳದೆ ಶಾಲೆಯ ಹೊರಗಡೆಗೆ ಕೂಡಿಸಿ ಪಾಠ ಹೇಳುತ್ತಿದ್ದ ವೆಂಕಟೇಶಯ್ಯ ಮೇಷ್ಟ್ರು ಲಕ್ಕ ಗಂಗಿಯನ್ನು ಮುಟ್ಟುತ್ತಾ ಒಂದೇ ಗೊರಗಿನಲ್ಲಿ ಬರುವುದನ್ನು ನೋಡಿ ಲಕ್ಕನನ್ನು ಶಾಲೆಯಿಂದ ಮನೆಗೆ ಕಳುಹಿಸಿ ಬಿಡುತ್ತಾರೆ. ಲಕ್ಕನ ವೈಯಕ್ತಿಕ ಅಕಾಂಕ್ಷೆ, ಅವನ ಕುಟುಂಬದ ಅಕಾಂಕ್ಷೆ ಮತ್ತು ಅವನು ಸಾಧಿಸಬಹುದಾಗಿದ್ದ ಹೊಸ ಸಾಮಾಜಿಕ ಸಂಬಂಧಗಳು ಇವೆಲ್ಲಾ ಲಕ್ಕನ ಒಂದು ಮಾನವೀಯ ಪ್ರತಿಕ್ರಿಯೆಯಿಂದ ನಾಶಗೊಳ್ಳುವುದು ನಮ್ಮ ಸಮಾಜ ತಲುಪಿರುವ ಸಂಕೀರ್ಣ ವಿಘಟನೆಯ ಸ್ವರೂಪವನ್ನು ತೋರಿಸುತ್ತದೆ.

ಲಕ್ಕನ ಶಿಕ್ಷಣ ಶಾಲೆಯ ಇನ್ನೊಂದು ಘಟನಾವಳಿ ಮತ್ತು ಅವನ ಅಣ್ಣ ಗೆಜ್ಜುಗಣ್ಣನ ಸಾವಿನ ದುರಂತ ಕೂಡ ಕೆಳವರ್ಗದವರ ಅಕಾಂಕ್ಷೆಗಳು ನುಚ್ಚು ನೂರಾಗುವ ಸಂಕೀರ್ಣ ಕ್ರಮವನ್ನು ಹೇಳುತ್ತದೆ. ಗೆಜ್ಜುಗಣ್ಣ ತನ್ನ ತಮ್ಮ ಅಕ್ಷರವನ್ನು ಕಲಿತು ಮುಂದೆ ಬರಲೆಂದು ಅತಿಯಾದ ಆಸೆ ಹೊಂದಿರುತ್ತಾನೆ. ಗೆಜ್ಜುಗಣ್ಣನ ಮದುವೆ ಮತ್ತು ಲಕ್ಕನನ್ನು ಶಾಲೆಗೆ ಕಳಿಸಬೇಕೆನ್ನುವ ಆಸೆಯಿಂದ ಅವನನ್ನು ಬುಂಡಮ್ಮನ ಹಟ್ಟಿಯ ಜೀತದಿಂದ ಬಿಡಿಸಲೆಂದು ಕೆಂಗಣ್ಣಪ್ಪನಿಂದ ಆರುನೂರು ರೂಪಾಯಿ ಸಾಲ ತಂದದ್ದು ಗೆಜ್ಜುಗಣ್ಣನ ಅಂತ್ಯ ಸಂಸ್ಕಾರದ ಖರ್ಚಿಗೆ ಆಗಿ,

ಕೊನೆಗೆ ಲಕ್ಕನ ತಂದೆ ಸಿಂಗಯ್ಯನೇ ಜೀತಕ್ಕೆ ನಿಲ್ಲುವ ಪ್ರಸಂಗ ಬರುತ್ತದೆ. ಸಾಲದ ಹಣವನ್ನು ತೀರಿಸಲು ಲಕ್ಕನೂ ಶಾಲೆಯ ಆಸೆ ತೊರೆದು ಮತ್ತೆ ಜೀತ ದುಡಿಮೆಗೆ ಮರಳಬೇಕಾಗುತ್ತದೆ. ಗೆಬ್ಬಗಣ್ಣಿ ತನ್ನ ದುರಂತಪೂರ್ಣ ಸಾವಿನ ಸ್ಥಳವಾದ ತಲಕಾಡಿಗೆ ಹೋಗಿದ್ದು ಕೆಂಗಣ್ಣನ ಒತ್ತಾಯಕ್ಕೆ ಅವನಿಗೆ ಜೊತೆಯಾಗಲಿಕ್ಕೆಂದು ಕೆಂಗಣ್ಣಪ್ಪನ ಒತ್ತಾಯವಿಲ್ಲದಿದ್ದರೆ ಗೆದ್ದುಗ ತಲಕಾಡಿಗೆ ಹೋಗುವ ಪ್ರಸಂಗವಾಗಲೀ ಕಾವೇರಿಯಲ್ಲಿ ಜಲಸಮಾಧಿಗೊಳ್ಳುವ ಪ್ರಸಂಗವಾಗಲೀ ಒದಗುತ್ತಿರಲಿಲ್ಲ ಎನ್ನುವಲ್ಲಿ ಈ ದುರಂತದಲ್ಲಿ ಕೆಂಗಣ್ಣಪ್ಪನ ಪಾತ್ರ ಸ್ಪಷ್ಟವಾಗುತ್ತದೆ. ನದಿ ಎಂದೊಡನೆ ಧುಮುಕುವ ಗೆಬ್ಬಗನ ವೈಯಕ್ತಿಕ ಜವಾಬ್ದಾರಿ ಮತ್ತು ಇದನ್ನೂ ಮೀರಿದ ಮನುಷ್ಯನ ದುರಂತದಲ್ಲಿ ಪಾಲುಗೊಳ್ಳುವ ನಿಸರ್ಗದ ನಿಗೂಢತೆ, ಕಾದಂಬರಿ ಗೆಬ್ಬಗನ ಸಾವು ಮತ್ತು ಸಿಂಗಯ್ಯನ ಕುಟುಂಬದ ದುರಂತವನ್ನು ಅದರ ಸಂಕೀರ್ಣ ಸ್ವರೂಪದಲ್ಲಿ ತೋರುತ್ತದೆ. ಹಾಗೆಯೇ ರುಕ್ಮಿಣಿಯ ಕಲಂಕಿತ ಗರ್ಭದ ಬಗೆಗೆ ಪಂಚಾಯತಿಯ ವಿಚಾರಣೆಯನ್ನು ಎದುರಿಸುವ ಲಕ್ಕ ಶಿಕ್ಷೆಗೆ ಒಳಪಟ್ಟರೆ ಕೃಷ್ಣಶಾಸ್ತ್ರಿಗಳು ಕೂದಲು ಕೊಂಕದಂತೆ ಉಳಿಯುತ್ತಾರೆ. ತಾನು ಶಿಕ್ಷೆ ಒಪ್ಪಿಕೊಳ್ಳುವಲ್ಲಿ ಕೂಡ ಲಕ್ಕನ ವೈಯಕ್ತಿಕ ಜವಾಬ್ದಾರಿ ಇದೆ. ರುಕ್ಮಿಣಿಯೇ ಬಲಾತ್ಕಾರ ಮಾಡಿದ್ದ ಸತ್ಯ ಸಂಗತಿಯನ್ನು ಹೇಳದಿರುವಲ್ಲಿ ಲಕ್ಕನ ವೈಯಕ್ತಿಕ ಜವಾಬ್ದಾರಿ ಇರುವುದು ಸ್ಪಷ್ಟ. ಆದರೆ ಲಕ್ಕನ ಇಂಥ ನಿಲುವು ಮಾನವೀಯತೆಯ ಧೋರಣೆ ಎನ್ನುವುದಾದಲ್ಲಿ, ಶಾಸ್ತ್ರಿಗಳು ತೋರುವ ಲಕ್ಕನನ್ನು ನಿರಪರಾಧಿಯನ್ನಾಗಿಸುವ ನಡಾವಳಿಕೆ, ಮಾತುಗಳು ಉಪೇಕ್ಷೆಗೆ ಒಳಪಡುವುದಲ್ಲದೇ ಶಾಸ್ತ್ರಿಗಳಿಗೆ ಹುಚ್ಚು ಹಿಡಿದಿದೆ ಎಂದು ಅವರ ಬಗ್ಗೆ ಮರುಕ ತಾಳುತ್ತ ಲಕ್ಕನಿಗೆ ಶಿಕ್ಷೆ ವಿಧಿಸುವ ರೀತಿ ಮೇಲುವರ್ಗದ ತೀರ್ಪುಗಾರರು ಕೆಳವರ್ಗದವರ ಬಗೆಗೆ ಹೊಂದಿರುವ ಮನೋಭಾವವನ್ನು ಸೂಚಿಸುತ್ತದೆ. ಒಂದು ವೇಳೆ ಲಕ್ಕನು ನಿಜ ಹೇಳಿದ್ದರೂ ಮೇಲು ಜಾತಿಯ ನಿರ್ಣಯಕಾರರು ಅವನು ಸುಳ್ಳು ಹೇಳುತ್ತಾನೆಂದು ಸಾಧಿಸಿ ಅವನಿಗೆ ನೀಡುವ ಶಿಕ್ಷೆಗೆ ಪ್ರಮಾಣ ಕೂಡ ಹೆಚ್ಚಿಸಬಹುದಾಗಿತ್ತು ಎನಿಸುತ್ತದೆ. ಲಕ್ಕನಿಗೂ ಈ ಭಾವನೆ ಇದ್ದೇ ಇದೆ, ತನ್ನ ಈ ವಿಚಾರಣೆ ನಡೆಯಲಿರುವ ದಿನಗಳಲ್ಲಿ ಲಕ್ಕ ತಾನು ಹಿಂದೊಮ್ಮೆ ರಾತ್ರಿ ಗಸ್ತು ತಿರುಗುವಾಗ, ಬೆಟ್ಟಯ್ಯ, ಚಿಕ್ಕೀರಮ್ಮನ ಹೆಣದ ಹೆಬ್ಬೆರಳನ್ನು ಕ್ರಯಪತ್ರಕ್ಕೆ ಒತ್ತಿಸಿಕೊಂಡು ಅವಳ ಆಸ್ತಿಯನ್ನು ಲಪಟಾಯಿಸಿದ ಸನ್ನಿವೇಶವನ್ನು ಜ್ಞಾಪಿಸಿಕೊಳ್ಳುತ್ತ "ಥೂ-ಯಂತಾ ಹೇಡಿಯಾ ನಾನು?"... ತನ್ನನ್ನು ತಾನೇ ಹಳಿದುಕೊಂಡ ಒಂದು ಪಕ್ಕಸ ನಾ ಯೋಳಿದ್ರೂವೆ ಆ ಉತ್ತಮರ ಪಂಚಾತೀಲಿ, ನಾ ಯಾವೂರ ಹಾಳೇಂತ ನನ್ನ ಮಾತ ಲೆಕ್ಕಕ್ಕೆ ತಕ್ಕತ್ತಿದ್ರು?... ಬೆಟ್ಟಯ್ನಗೆ ಆಗದೆ ಇದ್ದೋರು ಈ ಹೈದಂಗೆ ದುಡ್ಡು ಕೈಟ್ಟು, ಇಲ್ಲ ಹೆದುರ್‍ಸಿ ಬೆದರ್‍ಸಿ ಈ ಹೈದ್ನಿಂದ ಸುಳ್ಳು ಸಾಕ್ಷಿ ಯೋಳಿಸ್ತಾ ಅವರೇಂತ ತಳ್ಳಾಕೋರು... ಅಂತಾನು ಅನ್ನುಸ್ತು...' ಎಂದು ಯೋಚಿಸುವಲ್ಲಿ ನ್ಯಾಯದ ದಾಳ ಯಾವ ಕಡೆಗೆ ಉರುಳುವುದೆಂದು ಲಕ್ಕ ತಿಳಿದಿರುವುದನ್ನು ಸೂಚಿಸುತ್ತದೆ.

ಸಾಮಾಜಿಕ ಸಂಬಂಧಗಳನ್ನು ವಿಶಾಲ ವ್ಯಾಪ್ತಿಯಲ್ಲಿ ಗ್ರಹಿಸುವ ವೈಶಾಖ ಕಾದಂಬರಿಯು ಮುಖ್ಯವಾಗಿ ಒಂದು ಪರಿಸ್ಥಿತಿಯನ್ನು ವಿವರಿಸುತ್ತದೆ. ಈ ಪರಿಸ್ಥಿತಿ ವಿಘಟನೆಗೊಂಡ ಸಮಾಜದ್ದು. ಈ ಕಾದಂಬರಿಯ ಉದ್ದಕ್ಕೂ ಪುನಃ ಪುನಃ ಮೂಡಿಬರುವ ಪಂಚಾಯತಿ ಪ್ರಕರಣಗಳು ಕಾದಂಬರಿಯ ಈ ಗ್ರಹಿಕೆಯನ್ನು ಸ್ಪಷ್ಟಪಡಿಸುತ್ತವೆ. ಸಮಾಜದ ಸುಗಮ ನಡವಳಿಕೆಯ ಉದ್ದೇಶದಿಂದ ನಿರ್ಮಾಣಗೊಂಡ ಪಂಚಾಯತಿ ವ್ಯವಸ್ಥೆ ಸಮಾಜದಲ್ಲಿನ ಬಹುತೇಕರಿಗೆ ಭಯಾನಕವಾಗಿದ್ದು ಅದೊಂದು ಪರಕೀಯಗೊಂಡ ಸಂಸ್ಥೆಯಾಗಿಬಿಟ್ಟಿದೆ. ವ್ಯವಸ್ಥೆಯ ಇಂತಹ ಈ ಪರಕೀಯಗೊಳ್ಳುವಿಕೆ ಉತ್ತಮ ಮತ್ತು ಕೆಳಜಾತಿಗಳೆಂದು ಕರೆಯಲ್ಪಡುವ ವರ್ಗಗಳೆರಡಕ್ಕೂ ಸಮಾನವಾಗಿರುವುದನ್ನು ಕಾಣುತ್ತೇವೆ. ಕಾದಂಬರಿಯ ಆರಂಭಕ್ಕೆ ಲಕ್ಕ-ಪಂಚಾಯತಿಯೋರು ಮಾಡೋ ನ್ಯಾಯದ ದಾಳ ಉಳ್ಳೋದು ಕೊನೀಕೆ ಉತ್ತಮರ ಕಡೀಕೇಯ ಎಂದು ಅದು ಎಂದೂ ನಮಗೆ ಒಳ್ಳೆಯದನ್ನು ಮಾಡಲಾರದೆಂದು ಗೊಣಗಿಕೊಳ್ಳುತ್ತಾನೆ. ಬುಂಡಮ್ಮನ ಎಮ್ಮೆಗಳು ಕಳೆದುಹೋದಾಗ ಲಕ್ಕನ ತಾಯಿ ಕಲ್ಯಾಣಿ-'ನಿಮ್ಮ ಕಾಲಿಗೆ ಬೀಳ್ತಿನಿ ನಾ ಬೇಕಾರೆ ಸಾಯೋತಂಕ ನಿಮ್ಮಟ್ಟೆ ಜೀತ ಮಾಡ್ತಿನಿ. ನನ್ನ ಮಗನನ್ನು ಮಾತ್ರ ಪಂಚಾತಿ ಮುಂದೆ ನ್ಯಾಯಕೆ ಕುಂದರಿಸಬ್ಯಾಡಿ, ಬುಂಡಮ್ಮಾರೆ' ಎಂದು ದೈನ್ಯಳಾಗಿ ಬೇಡಿಕೊಳ್ಳುತ್ತಾಳೆ. ಹೀಗೆ ಸಮಾಜದ ಭಿನ್ನ ಭಿನ್ನ ಸ್ತರಗಳಲ್ಲಿರುವ ಎಲ್ಲರೂ ನ್ಯಾಯ ನಿರ್ಣಯದ ಈ ಪಂಚಾಯತಿ ವ್ಯವಸ್ಥೆಯ ಬಗೆಗೆ ಭಯಗ್ರಸ್ತರಾಗಿರುವುದನ್ನು ಕಾಣುತ್ತೇವೆ. ಇದಲ್ಲದೆ ಪಂಚಾಯತಿಯ ನಿರ್ಣಯಗಳು ನಿಜವಾದ ಬಲು ದೂರಕ್ಕೆ ನಿಲ್ಲುವಂತವು. ಪರಸ್ಪರ ಹೋರಾಟಕ್ಕೆ ನಿಂತ ಗೌಡಯ್ಯ ಗಂಗಪ್ಪ ಮತ್ತು ಕ್ವಾಟೆ ಬುಳ್ಳಪ್ಪ ಇವರಿಬ್ಬರ ನಡುವೆ ಸಿಕ್ಕ ಬುಂಡನ ಹೈದನಿಗೆ ಪಂಚಾಯತಿಯ ನಡಾವಳಿಕೆಯಿಂದ ದೊರೆಯುವ ನ್ಯಾಯ ಎಲುಬು ಮುರಿದುಕೊಂಡು ಹೈರಾಣಾಗುವುದು, ಪಾದ್ರಿ ರೋಸಯ್ಯ ಗುರುಗಳು ಏರ್ಪಡಿಸುವ ಪಂಚಾಯತಿ ಕುಳುವಾರಿ ದೊಡ್ಡಯ್ಯನ ಮಗ ಪುಟ್ಟಾರಿಯ ಜೀವನವನ್ನೇ ಹದಗೆಡಿಸುತ್ತದೆ. ಎಂಕಿಯ ಮಗ ಹಲಗನ ಆತ್ಮಹತ್ಯೆಯ ಪಂಚಾಯತಿ ಟಗರೂರ ಹುಚ್ಚು ಬೋರಿಯರ ಪ್ರಾಯದ ಮಗಳು ಚೆಲುವಿಯ ಬದುಕು ಕೆಡಿಸುತ್ತದೆ. ಗಂಗೆ ಮತ್ತು ಅಡವಿಯಪ್ಪರ ನಡುವಿನ ಜಗಳ ತೀರ್ಪುಕೊಡುವ ಪಂಚಾಯತಿ ಗಂಗಿಯನ್ನು ಹಾದರಕ್ಕೆ ದೂಡಿದರೆ, ಅಡವಿಯಪ್ಪವ ಕೊಟ್ಟಿಗೆಯನ್ನು ಇಕ್ಕಾಟ್ಟಾಗಿಸಿ ಅವನಿಗೂ ಅನ್ಯಾಯವೆಸಗುತ್ತದೆ.

ಕಾದಂಬರಿಯ ಉದ್ದಕ್ಕೂ ಹೀಗೆ ನ್ಯಾಯ ನಿರ್ಣಯ ವ್ಯವಸ್ಥೆಯು ಪಂಚಾಯತಿಗಳ ವಿವರಗಳನ್ನು ಕೊಡುತ್ತದೆ. ನ್ಯಾಯ ನಿರ್ಣಯ ವ್ಯವಸ್ಥೆಯ ಪಂಚಾಯತಿ ಅತಿ ಪ್ರಮುಖವಾದ ಸಾಮಾಜಿಕ ಸಂರಚನೆಯಾಗಿದೆ. ದುರಂತದ ಅನುಭವ ಹೆಚ್ಚಾಗಿ ಕೌಟುಂಬಿಕ ನೆಲೆಯಲ್ಲಿ ಅನುಭವಿಸಲ್ಪಡುತ್ತದೆ. ಲಕ್ಕನ ಶಿಕ್ಷೆ ಅಥವಾ ಅವನ ಜೀವನದ ದುರಂತ ಅವನ ಕುಟುಂಬದಲ್ಲಿ ತಳಮಳ ಹುಟ್ಟಿಸಿದರೆ ರುಕ್ಮಿಣಿಯ ದುರಂತ ಕಾದಂಬರಿಯೊಳಗೆ ಶಾಸ್ತ್ರಿಗಳ ಕುಟುಂಬಕ್ಕೆ ಮಾತ್ರ

ಸಂಬಂಧಪಟ್ಟದಾಗಿ ಬಿಡುತ್ತದೆ. ಹೀಗೆ ವೈಯಕ್ತಿಕ ದುರಂತಗಳು ಸಾಮಾಜಿಕ ತಳಮಳ ಹುಟ್ಟಿಸದಿರುವ ಸಂದರ್ಭದಲ್ಲಿಯೇ ವೈಯಕ್ತಿಕ ದುಷ್ಟತನಗಳು ಸಾಂಸ್ಥೀಕರಣಗೊಂಡು ಸಾಮಾಜಿಕ ವಿಘಟನೆಗೆ ಕಾರಣವಾಗುತ್ತದೆ. ನಂಜೇಗೌಡ, ಕೇಶವಯ್ಯ ಇಂಥ ಕೆಲವರ ದುಷ್ಟತನ ನ್ಯಾಯನಿರ್ಣಯ ವ್ಯವಸ್ಥೆಯು ನೈತಿಕ ಅಧಃಪತನಕ್ಕೆ ಕಾರಣವಾಗಿದೆ.

ಬೇರೆ ಬೇರೆ ಸ್ತರಗಳಲ್ಲಿನ ಅನ್ಯಾಯಗಳನ್ನು ನಿರೂಪಿಸುತ್ತಾ ನಡೆಯುವ ಕಾದಂಬರಿ ಕೊನೆಗೆ ರುಕ್ಮಿಣಿಯ ದುರಂತಪೂರ್ಣ ಕಣ್ಮರೆ ಮತ್ತು ಲಕ್ಕನನ್ನು ಊರ ಗಡಿಯೊಳಗೆ ಬರದಂತೆ ವಿಧಿಸುವ ನಿಷೇಧ ಮತ್ತು ಆ ಮೂಲಕ ಲಕ್ಕನ ಕುಟುಂಬದ ದುರಂತ ಹೇಳುತ್ತದೆ.

ಜಾತಿ ಹಾಗೂ ವರ್ಗ ಸಂಘರ್ಷಗಳ ಹಿನ್ನಲೆಯಲ್ಲಿ ಇಲ್ಲಿಯ ಲೈಂಗಿಕ ಸಂಬಂಧಗಳನ್ನು ಗಮನಿಸಿದಾಗ ಕೆಲವು ಕುತೂಹಲಕಾರಿ ಸಂಗತಿಗಳನ್ನು ಕಾಣಬಹುದು. ರುಕ್ಮಿಣಿ ಶಿವಾಚಾರದ ಗಂಗಿ ಹಾಗೂ ಜಾನಕಿ ಮತ್ತು ಬುಂಡಮ್ಮನ ಸೊಸೆ. ಈ ಮೊದಲಾದ ಮೇಲುಜಾತಿಯ ಹೆಣ್ಣುಗಳು ಹೊಂದಿರುವ ಲೈಂಗಿಕ ಸಂಬಂಧಗಳು ಯಾರಿಗೂ ಗೊತ್ತಾಗಾದ ಹಾಗೆ ಗುಪ್ತತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತವೆ. ನಿಸರ್ಗ ಸಹಜವಾದ ಋತುಮತಿಯಂತಹ ವಿಷಯವನ್ನು ಮುಚ್ಚಿಡುವ ಮಡಿವಂತಿಕೆ ಜಾನಕಿಯಂತವರಲ್ಲಿ ಕಂಡುಬಂದರೆ, ಮದುವೆಯಾದವಳೊಬ್ಬಳು ಬೇರೆಯವನೊಂದಿಗೆ ಮರು ಮದುವೆಯಾಗಿ ಬದುಕುತ್ತಿರುವ ವಿಷಯ ಕೂಡಾ ತನ್ನ ಹೆಣ್ಣು ಮಕ್ಕಳ ಕಿವಿಯ ಮೇಲೆ ಬೀಳದಂತೆ ಪಾತುವಿನಂತಹ ಪಾತ್ರಗಳು ವರ್ತಿಸುತ್ತವೆ. ಕದ್ದು ಮುಚ್ಚಿ ಮಾಡುವ ಲೈಂಗಿಕ ಸಂಬಂಧ ಫಲವಾದ ಕಳ್ಳಬಸಿರು ಈ ಹೆಣ್ಣುಮಕ್ಕಳ ಜೀವ ಹಿಂಡುತ್ತದೆ. ಇಂತಹ ಒಂದು ಸಮಸ್ಯೆ ಕೆಳಜಾತಿಯ ಹೆಣ್ಣು ಮಕ್ಕಳಲ್ಲಿ ಕಾಡುವುದಿಲ್ಲ. ಎಂಕಟಿ, ದ್ಯಾವಾಜಮ್ಮ ಶಿವುನಿಯರಂತಹ ಕೆಳಜಾತಿ ಹೆಣ್ಣುಮಕ್ಕಳು ಯಾವ ಭಯವಿಲ್ಲದೆ ಇಂತಹ ಸಂಬಂಧಗಳಲ್ಲಿ ತೊಡಗಿಕೊಳ್ಳುತ್ತಾರೆ. ಇವರದು ತೆರೆದಿಟ್ಟ ಬದುಕು, ಮರ್ಯಾದೆ ಮಡಿವಂತಿಕೆಯ ಪ್ರಶ್ನೆ ಕಾಡುವುದು ಮೇಲು ಜಾತಿಯ ಹೆಣ್ಣುಗಳಲ್ಲಿ ಮಾತ್ರವೆಂದು ಹೇಳಬಹುದು. ಮೇಲು ಜಾತಿಯ ಹೆಣ್ಣು ಮಕ್ಕಳು ತತ್ತರಿಸಿ ನಡುಗಿದರೆ, ಕೆಳಜಾತಿಯ ಹೆಣ್ಣು ಮಕ್ಕಳು ಏನೂ ಆಗಿರದಂತೆ ಬದುಕಿನ ಸಹಜತೆಗೆ ಒಗ್ಗಿಕೊಂಡವರಂತೆ ಕಾಣಿಸುತ್ತದೆ. ಇನ್ನೂ ಸೂಕ್ಷ್ಮವಾಗಿ ಗಮನಿಸಬೇಕೆಂದರೆ, ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ರುಕ್ಮಿಣಿಯಂತಹ ಹೆಣ್ಣುಗಳು ಘನಘೋರ ಯಾತನೆಯನ್ನು ಅನುಭವಿಸುತ್ತವೆ. ಮೇಲು ಜಾತಿಯವರಲ್ಲಿಯೂ ಬುಂಡಮ್ಮನ ಸೊಸೆಯಂತಹ ಲಿಂಗಾಯುತ ಹೆಣ್ಣುಗಳು ಇಂತಹ ಸಂಬಂಧಗಳನ್ನು ಅರಗಿಸಿಕೊಂಡು ಬದುಕಿದ್ದರೆ, ಕೃಷ್ಣಶಾಸ್ತ್ರಿಗಳ ಸೊಸೆ ರುಕ್ಮಿಣಿಯಂತಹ ಬ್ರಾಹ್ಮಣ ಹೆಣ್ಣುಗಳು ನರಕಯಾತನೆಯನ್ನು ಅನುಭವಿಸುತ್ತವೆ. ಅಂದರೆ ವೈಶಾಖ ಕಾದಂಬರಿಯಲ್ಲಿ ಎಲ್ಲಾ ಜಾತಿಯ ಹೆಣ್ಣುಗಳಲ್ಲಿ ಅನೈತಿಕ ಲೈಂಗಿಕತೆ ಕಾಣಿಸಿಕೊಂಡರೂ ಕೂಡ ಅವರಿಗೆ ದೊರೆಯುವ ಶಿಕ್ಷೆಯ ವಿಧಾನಗಳಲ್ಲಿಯೂ ಕೂಡ ತಾರತಮ್ಯವಿದೆ. ಆದ್ದರಿಂದ

ಯಾವುದೇ ವಿಷಯವನ್ನೆತ್ತಿಕೊಂಡರೂ ಈ ದೇಶದ ವ್ಯವಸ್ಥೆಯಲ್ಲಿ ಜಾತಿಯೇ ಪ್ರಮುಖ ಮಾನದಂಡವಾಗಿ ಬಿಡುತ್ತದೆ.

ಜಾತಿಯು ಸಾಮಾಜಿಕ ಸ್ತರವಿನ್ಯಾಸದ ಒಂದು ರೂಪವಾಗಿದ್ದು ಏಣಿ-ಶ್ರೇಣಿಗಳಿಂದ ಕೂಡಿದ ವ್ಯವಸ್ಥೆಯಾಗಿದೆ. ಹಿಂದೂ ಸಮಾಜವು ಜಾತಿ-ಉಪಜಾತಿಗಳೆಂಬ ಅಸಂಖ್ಯಾತ ಸಮೂಹಗಳನ್ನು ಒಳಗೊಂಡಿದೆ. "ಮೇಲು ಮತ್ತು ಕೀಳು" ಅಥವಾ ಶ್ರೇಷ್ಠ ಮತ್ತು ಕನಿಷ್ಠ "ಪವಿತ್ರ" ಅಪವಿತ್ರ ಎಂಬ ಭಾವನೆಯ ಮೇಲೆ ಜಾತಿ ವ್ಯವಸ್ಥೆ ರೂಪಿತವಾಗಿದೆ. ಜಾತಿಯ ಸಾಮಾಜಿಕ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿ ಬ್ರಾಹ್ಮಣರಿಗೆ ಅತ್ಯುನ್ನತ ಸ್ಥಾನವಿದ್ದರೆ "ಅಸ್ಪೃಶ್ಯ"ರೆಂದು ಕರೆಯಲ್ಪಡುವ ಹರಿಜನರಿಗೆ ಅತ್ಯಂತ ಕೀಳು ಸ್ಥಾನವಿದೆ. ಸಮಾಜದಲ್ಲಿರುವ ಜನರೆಲ್ಲರಿಗೂ ಒಂದೇ ಬಗೆಯ ಅವಕಾಶ ಸ್ಥಾನಮಾನಗಳನ್ನು ನೀಡಲಾಗದೇ ಇದ್ದುದರಿಂದ ಮತ್ತು ಅದು ಅಸಾಧ್ಯವೂ ಆಗಿರುವುದರಿಂದ ಅವರನ್ನು ವಿಭಿನ್ನ ಸ್ತರಗಳಾಗಿ ವಿಂಗಡಿಸಲಾಗಿದೆ.

ಬ್ರಾಹ್ಮಣ ಹೆಣ್ಣಿನ ನಡವಳಿಕೆಗಳ ಮೇಲೆ, ಲೈಂಗಿಕ ನಡವಳಿಕೆಗಳ ಮೇಲೆ ಇರುವ ವಿಪರೀತವಾದ ಬಿಗಿಕ್ರಮಕ್ಕೆ ಜಾತಿಮೂಲವಾದರೆ ಕಾರಣವೂ ಇರುವಂತಿದೆ. ಬ್ರಾಹ್ಮಣ ಸಂತತಿಯ ಜಾತಿಯ "ಪಾವಿತ್ರ್ಯ"ವನ್ನು ರಕ್ಷಣೆ ಮಾಡುವ ಹೊಣೆಯನ್ನು ಇಲ್ಲಿ ಹೆಣ್ಣಿನ ಮೇಲೆ ಹೊರಿಸಲಗಿ. ಬ್ರಾಹ್ಮಣ ಗಂಡಿಗೆ ಆ ಕಟ್ಟಿಲ್ಲದಿದ್ದರೂ ನಡೆಯುತ್ತದೆ. ಯಾಕೆಂದರೆ ಅವನ ಬ್ರಾಹ್ಮಣೇತರ ಹೆಂಗಸರ ಸಂಬಂಧದಿಂದ ಬಂದ ಮಕ್ಕಳು ಜಾತಿಯೊಳಗೇನೂ ಬರುವುದಿಲ್ಲ. ಅವು ತಮ್ಮ ತಾಯಂದಿರೊಂದಿಗಿದ್ದು ಬ್ರಾಹ್ಮಣೇತರವಾದ ಆಯಾ ಸಮುದಾಯದಲ್ಲಿ ಸೇರಿ ಹೋಗುತ್ತವೆ. ಆದ್ದರಿಂದ ಬ್ರಾಹ್ಮಣ ಹೆಂಗಸರ ಕಟ್ಟೆಎನೊಳಗಿದ್ದರೆ ಅವರಿಗೆ ಅವರ ಬ್ರಾಹ್ಮಣಗಂಡಂದಿರಿಂದ ಮಾತ್ರ ಹುಟ್ಟುವ ಮಕ್ಕಳು ಹೇಗೋ ಬ್ರಾಹ್ಮಣರಾಗಿರುತ್ತಾರೆ. ಆದ್ದರಿಂದ ಹೆಂಗಸು ಗಡಿ ದಾಟದಿದ್ದರೆ ಜಾತಿಯನ್ನು ಕಾಯ್ದ ಹಾಗೂ ಆಯಿತು ಬ್ರಾಹ್ಮಣ ಗಂಡಸರ ಸ್ವಾತಂತ್ರ್ಯ ಉಳಿದ ಹಾಗಾಯಿತು. ಹೀಗೆ ಜಾತಿಯ "ಪಾವಿತ್ರ್ಯ"ಕ್ಕೂ ಹೆಣ್ಣಿನ ಪಾವಿತ್ರ್ಯಕ್ಕೂ ನಂಟು ಬಿತ್ತು. ಹೆಣ್ಣಿನ ಲೈಂಗಿಕ ಪಾವಿತ್ರ್ಯತೆಯ ಮೂಲಕ ಜಾತಿ ಶುದ್ಧತೆಯನ್ನು ಕಾಪಾಡುವ ತವಕ ಅನೇಕ ರೀತಿಯ ದಿಗಿಲುಗಳನ್ನು ಹುಟ್ಟು ಹಾಕಿರುವಂತೆ ಕಾಣುತ್ತದೆ. ಈ ಸಮುದಾಯದ ಬಹುತೇಕ ಹೆಂಗಸರು ಮನೆಯ ಹೊರಗಿನ ದುಡಿಮೆಗೆ ಕೈ ಹಚ್ಚುವ ಬಗ್ಗೆ ಆಧುನಿಕ ಪೂರ್ವದಲ್ಲಿ ಇದ್ದ ನಿಷೇಧವೂ ಅಂಥದೊಂದು ಬಗೆಯ ದಿಗಿಲು ಮೂಲದ್ದಿರಬಹುದು. ಈ ಲೈಂಗಿಕ ಕಟ್ಟಿನ ತೀವ್ರತೆಯ ಸ್ವರೂಪಕ್ಕೆ 'ವೈಶಾಖ' ಕಾದಂಬರಿಯ ಪಾತುವಿನ ವರ್ತನೆಯೂ ಒಂದು ನಿದರ್ಶನವಾಗಿದೆ. ವಿವಾಹಿತೆಯೊಬ್ಬಳು ಬೇರೊಬ್ಬನನ್ನು ಮದುವೆಯಾಗಿ ಬದುಕುತ್ತಿರುವ ಸಂಗತಿ ಕೂಡ ತನ್ನ ಹೆಣ್ಣು ಮಕ್ಕಳ ಕಿವಿಯ ಮೇಲೆ ಬೀಳದಂತೆ ಈಕೆ ಎಚ್ಚರವಹಿಸುತ್ತಾಳೆ.

ಕಾದಂಬರಿಯಲ್ಲಿ ಬರುವ ಸುಶೀಲ ಮತ್ತು ಲಕ್ಷ್ಮಮ್ಮ ವಿಧವೆಯರಾಗಿದ್ದಾರೆ. ತಮ್ಮಂತೆಯೇ ವಿಧವೆಯಾದ ರುಕ್ಮಿಣಿಯು ತಮ್ಮಂತೆ ಬೋಳಾದ ಮಂಡೆಯನ್ನು ಹೊತ್ತಿರಬೇಕಾದ್ದೇ ನ್ಯಾಯ ಎಂದು ತಿಳಿದು ಅದರ ಸಲುವಾಗಿ ವಾದಿಸಿದರು. ಸುಶೀಲ ಸಕೇಶಿಯಾದ ರುಕ್ಮಿಣಿಯ ತಲೆಗೂದಲನ್ನು ಕತ್ತರಿಸುವುದಕ್ಕೆ ಹೋಗಿದ್ದಳು. ರುಕ್ಮಿಣಿ ಮತ್ತು ಲಕ್ಕರ ನಡುವೆ ನಡೆದ ಸಂಭಾಷಣೆಯನ್ನು ಕದ್ದು ಕೇಳಿ ಊರಿಗೆಲ್ಲಾ ಹರಡಿದ್ದಲ್ಲದೆ ರುಕ್ಮಿಣಿಗೆ ಬಲವಾದ ಶಿಕ್ಷೆಯಾಗಬೇಕೆಂದೂ ಲಕ್ಷ್ಮಮ್ಮ ವಾದಿಸುತ್ತಾಳೆ. ರುಕ್ಮಿಣಿಯ ಘಟಶ್ರಾದ್ಧವನ್ನು ಅವಳ ಮನೆಯ ಮುಂದೆಯೇ ಮಾಡಬೇಕೆಂಬ ಸೂಚನೆಯನ್ನು ಲಕ್ಷ್ಮಮ್ಮನೇ ಕೊಡುತ್ತಾಳೆ. "ಛೇ, ಛೇ ಇಂಥ ಪಾಪಿಗೆ ನೀರಿರೊ ಜಾಗದಲ್ಲಿ ಕರ್ಮ ಆಚರಿಸಬಾರದು, ಅವಳ ಮನೆ ಮುಂದೇನೆ ನಡೆಸಬೇಕು. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯುಳ್ಳ ಪುರುಷಪ್ರಧಾನವಾದ ಸಮಾಜ ಜಾತಿ ಮೂಲವು ಆದ ಹೆಂಗಸಿನ ಮೇಲಿನ ತುಳಿತವನ್ನು ಪೋಷಿಸುವ ಮೌಲ್ಯಗಳನ್ನು ಹೆಂಗಸರಲ್ಲೂ ಎಷ್ಟು ಯಶಸ್ವಿಯಾಗಿ ಬೇರೂರಿಸಿದೆ ಎಂಬುದಕ್ಕೆ ಲಕ್ಷ್ಮಮ್ಮನ ಈ ನಡವಳಿಕೆಯೂ ಸಾಕ್ಷಿಯಾಗಿದೆ. "ಯೇನಾರ ಅಗ್ಲಿ, ಈ ಬ್ರಾಂಬರು ತಲೆ ಬೋಳುಸ್ತೀವಿ, ಊರು ಬುಟ್ಟೋಡುಸ್ತೀವಿ, ಅನ್ನೋತಂಕ ವೋಗ್ಯಾರದಾಗಿತ್ತು. ಬೊಸರಿ ಎಂಗಸು, ಅವುಳ ಆ ತೋರಗೋಳಕಿಚ್ಚು ಉಯ್ಯಕೊಬ್ಯಾಡದೂಂತ ಅವುರಿಗೆ ಅನ್ನುಸಬ್ಯಾಡ" ಎಂಬ ಮಾತುಗಳಲ್ಲಿ ಕಾಣುವ ಕಲ್ಯಾಣಿಗೂ ಈ ಮೇಲಿನ ಲಕ್ಷ್ಮಮ್ಮನಿಗೂ ಎಷ್ಟು ಅಂತರ ಕಲ್ಯಾಣಿಯ ಈ ಮಾತುಗಳಲ್ಲಿರುವ ಮಾನವೀಯ ಅನುಕಂಪವು ಪರಿಸ್ಥಿತಿಗೆ ಭಾಗಶಃ ಹೊಣೆಗಾರರು ಆದ ಕೃಷ್ಣಶಾಸ್ತ್ರಿಗಳಲ್ಲಿರುವುದನ್ನು ಬಿಟ್ಟರೆ ಯಾವ ಬ್ರಾಹ್ಮಣ ಅಥವಾ ಬ್ರಾಹ್ಮಣತಿಯ ಬಾಯಲ್ಲೂ ಇಲ್ಲ. ತಮಗೆ ಅಪಾಯ ಉಂಟಾದೀತೆಂಬ ಹೆದರಿಕೆಯಿಂದ ಮಾಡಿದ ಶ್ರಾದ್ಧ, ಸಂತರ್ಪಣೆಗಳಿವೆಯೇ ಹೊರತು ತಮ್ಮ ಜೊತೆ ಬದುಕಿದ ಒಂದು ಜೀವಿಗೆ ಹೀಗಾಯಿತಲ್ಲಾ ಎಂಬ ಅನುಕಂಪವಾಗಲಿ ಇಲ್ಲ. ಏಕೆ ಹೀಗಾಯಿತೆಂಬ ವಿಚಾರವಾಗಲಿ ಇಲ್ಲ, ಒಂದು ವೇಳೆ ರುಕ್ಮಿಣಿಯ ಸ್ನೇಹಿತೆ ನಾಗಲಕ್ಷ್ಮಿಯಂಥವರು ಒಳಗೆ ಮರುಗಿರಬಹುದಾದರೂ ಏಕಮುಖವಾದ ತೋರಿಕೆಗಾದರೂ ಆಚಾರನಿಷ್ಠವಾಗಿರಬೇಕಾದ ವ್ಯವಸ್ಥೆಯಲ್ಲಿ ಮರುಕ ಹೇಗೆ ಬಾಯ್ಬಿಡುತ್ತದೆ? ಅನುಕಂಪ ಹೇಗೆ ಕಣ್ತೆರೆಯುತ್ತದೆ? ದಲಿತ ಸಮೂಹದಿಂದ ಬಂದ ಕಾಂಡಿಮಾದಿಯ ಮಗಳು ಸಾವಂತ್ರಿಯ ಮೇಲೆ ಕೆಂಗಣ್ಣಪ್ಪ ಎರಗಿದ ಸಂಗತಿಯು ಚಾಪೆ ಹೆಣೆಯುವಾಗ ಬಲಾತ್ಕಾರದ ಬಗ್ಗೆ ಹೇಳುತ್ತಾಳೆ. ತನ್ನ ನೋವನ್ನು ತನ್ನ ಗೆಳತಿಯರೊಂದಿಗೆ ಹಂಚಿಕೊಳ್ಳುತ್ತಾಳೆ. ತಮ್ಮ ಸನ್ನಿವೇಶದ ಅಸಹಾಕತೆ ಮತ್ತು ಆಪತ್ತಿನಿಂದ ಆ ಹೆಂಗಸರ ನಡುವೆ ಹರಡಿದ ದಿಗ್ಭ್ರಮೆಯನ್ನು ದ್ಯಾವಾಜಿಯು ಕೆಂಗಣ್ಣಪ್ಪನ ನಪುಂಸಕತ್ವದ ಕಥೆಯಿಂದ ದೂರವಾಗಿಸುತ್ತಾಳೆ. ಬ್ರಾಹ್ಮಣ ಹುಡುಗಿ ಜಾನಕಿಯ ಮೇಲೆ ನಡೆದ ಅತ್ಯಾಚಾರ ಮನೆಯ ಹೊರಗಿರಲಿ, ಮನೆಯೊಳಗೂ ಮಾತಿಗೆ ಮುಕ್ತವಾಗಿ ಬರುವಂತಿರಲಿಲ್ಲ. ಆ ಹುಡುಗಿಯ ಅಣ್ಣನಿಗೂ ವಿಷಯ ತಿಳಿಯದಂತೆ ಗುಟ್ಟಾಗಿಟ್ಟು ಸಜಾತೀಯ ಆಚಾರವಂತರ ಮನೆಯ ಹುಡುಗನೊಂದಿಗೆ ಮದುವೆಗೊತ್ತು ಮಾಡುತ್ತಾರೆ.

ತನ್ನ ಹಿತಾಸಕ್ತಿಗಳಿಗಾಗಿ ಮಹಿಳೆಯನ್ನು ತುಳಿಯುವ ಸಮಾಜದಲ್ಲಿ ಹೆಣ್ಣು ಪಡೆಯುವ ಸಮಾಜೀಕರಣ ಅವಳ ಸ್ವ ಸಮರ್ಥನೆಗಳಿಗಾಗಲಿ ಏನನ್ನಾದರೂ ಪ್ರತಿಭಟಿಸಲಾಗಲೀ ಸಹಾಯ ಮಾಡುವುದಿಲ್ಲ. ಬೇರೆ ಬಗೆಯ ಹೋರಾಟ ಸಮರ್ಥನೆಗಳು ಹಾಗಿರಲಿ, ಅನಿಸಿದ್ದನ್ನು ಸ್ಪಷ್ಟವಾಗಿ, ಬಲವಾಗಿ, ಧೈರ್ಯವಾಗಿ ಹೇಳುವುದಕ್ಕೂ ಆಗದಂತೆ ಮಾಡಿರುತ್ತದೆ. ತನಗೆ ಸೀರೆ ಕೊಳ್ಳುವುದು ಬೇಡವೆಂದು ಸಿವುನಿ ಜವಳಿಯಂಗಡಿಯಲ್ಲಿ ತನ್ನ ಸೀರೆ ಕೊಳ್ಳುವುದು ಬೇಡವೆಂದು ಸಿವುನಿ ಜವಳಿಯಂಗಡಿಯಲ್ಲಿ ತನ್ನ ಅಪ್ಪನಿಗೆ ಹೇಳಿದಾಗ, "ತಗೋಮ್ಮ ಸಿವುನಿ" ನೀನೂ ಒಂದು ಸೀರೆ ತಗೋ" ಎಂದು ಕಣ್ಣಿನಲ್ಲೇ ನಗುತ್ತ ಪುಸಲಾಯಿಸಿದ ಕೇಶವಯ್ಯನ ಬಗ್ಗೆ "ಶಿವಪೂಜೇಲಿ ಕರಡಿ ಬುಟ್ಟಂಗೆ ಈ ವಯ್ಯ ಯಾತಾಕ್ಕಿಂದ ಬಂದ" ಎಂದು ಬೇಸರಿಸಿದ್ದಷ್ಟೇ ಅಲ್ಲದೇ "ಈ ಬಟ್ಟಿ ತಕ್ಕತ್ತಿಕೇನು ನಮ್ಮಯ್ಯ, ಇದರಾಗೆ ನಿಮ್ಮದ್ಯಾನಸೋಮಿ ಅಗ್ಗರ್ಣಿ"[೫] ಎಂದು ನೇರವಾಗಿ ಮುಖತೆರ ಹೊಡೆದಂತೆ ಹೇಳುತ್ತಾಳೆ. ಕೇಶವಯ್ಯನ ಶಿಫಾರಸ್ಸಿನಿಂದ ಈ ಬಟ್ಟೆಯ ಸಾಲ ತಮಗೆ ದೊರಕುತ್ತಿದೆ ಎಂದು ತಿಳಿದ ಮೇಲೆ "ನಂಗೆ ಯಾನೂ ಬ್ಯಾಡಕೆ ಬ್ಯಾಡ" ಎಂದು ಹೊರಟೇ ಹೋಗಾತ್ತಾಳೆ. ತನಗಿಷ್ಟವಿಲ್ಲದಿದ್ದರೂ ಬೇರೆ ಗಂಡಸೊಬ್ಬ ಹೀಗೆ ತನ್ನ ವಿಷಯಕ್ಕೆ ಪ್ರವೇಶಸಿದಾಗ ದಲಿತ ಹೆಣ್ಣೊಬ್ಬಳು ಪ್ರತಿಕ್ರಿಯಿಸುತ್ತಾಳೆ. ಒಮ್ಮೆ ಆಟದಲ್ಲಿ ಗೆದ್ದ ಸರಸಿ ಓಡಿಬಂದು ರುಕ್ಮಿಣಿಯನ್ನು ತಬ್ಬಿಕೊಂಡಾಗ ಅವಳ "ಪುಟ್ಟ ತುಟಿಗಳಿಗೆ ಮೇಲಿಂದ ಮೇಲೆ "ರುಕ್ಮಿಣಿ ಮುತ್ತಿಟ್ಟಳು. ಆಗ ಅಲ್ಲಿಗೆ ಬಂದ ನಂಜೇಗೌಡ ಕುಹಕವಾಗಿ ನಗುತ್ತ "ಮಕ್ಕಳ ತುಟಿಗೆ ಮುತ್ತಿಟ್ಟಂಗೆ ಅಂತಾವ ಮೊದ್ಲೆ ಗಾದೆ ಯೋಳಕ್ಕಿಲ್ಲ? ಅದರಾಗ್ಯಾವ ರುಚಿ ಇದ್ದದು?"[೬] ಎನ್ನುತ್ತಾನೆ. ಇದಕ್ಕೆ ರುಕ್ಮಿಣಿಯ ಪ್ರತಿಕ್ರಿಯೆ ಹೀಗೆದೆ. "ಅದರ ರುಚಿಯನ್ನು ಬಲ್ಲವರೇ ಬಲ್ಲರು ಎಂದು ಹೇಳಲು ಹೋಗಿ ಈ ನೀಚನ ಮಾತ್ರ ಬೆಳೆಸುವುದೂ ಉಚಿತವಲ್ಲವೆಂದು ಮನಗಂಡು ಸರಸಿಯನ್ನಾ ಆಡಲು ಬಿಟ್ಟು ಅಡಿಗೆ ಕೋಣೆಯತ್ತ ಅಡಿಯಿಟ್ಟಳು"[೭]. ತನ್ನಷ್ಟಕ್ಕೆ ಸಿಡಿಮಿಡಿಗೆಂಡಳ ಹೊರತು ನಂಜೇಗೌಡನ ಮುಖಕ್ಕೆ ನೇರವಾಗಿ ಏನೂ ಹೇಳಲಾರಳು. ನಂದೇಗೌಡನಷ್ಟು ಅಪಾಯದ ಬಲವಿದ್ದ ಮನುಷ್ಯ ಕೇಶವಯ್ಯನಲ್ಲದಿದ್ದರೂ ಸಿವುನಿಯ ಕುಟುಂಬಕ್ಕೆ ಕೇಶವಯ್ಯನ ಹಂಗಾರುವಂತೆ ರುಕ್ಮಿಣಿಯ ಕುಟುಂಬಕ್ಕೆ ನಂಜೇಗೌಡನ ಹಾಗಿಲ್ಲ. ಆದರೂ ರುಕ್ಮಿಣಿ ಸಿವುನಿಯಂತೆ ಮುಖಕ್ಕೆ ರಾಚುವಂತೆ ಹೇಳಲಾರಳು.

ಕೆಳವರ್ಗ-ಜಾತಿಗಳ ಹೆಂಗಸರು ಒಂದು ರೀತಿಯಿಂದ ಅತ್ಯಂತ ಶೋಷಿತರು, ಮತ್ತೊಂದು ರೀತಿಯಲ್ಲಿ ಮೇಲು ಜಾತಿ-ವರ್ಗಗಳ ಕೆಲವು ಮಿತ್‌ಗಳಿಂದ ಬಿಡುಗಡೆ ಪಡೆದವರು, ಮನೆಯಲ್ಲಾದರೂ ಕೆಲವರು ಸ್ವಲ್ಪ ಉಸಿರಾಡಬಹುದು. ಕಲ್ಯಾಣಿಯಂಥವರು ಸಮಾಜದ ತುಳಿತಕ್ಕೆ ಒಳಗಾಗಿದ್ದರೂ ಅವರ ದಾಸಿ ವ್ಯವಸ್ಥೆಯಲ್ಲಿ ಕೇಳಲಾರದಾದರೂ ತಮ್ಮ ಪ್ರೀತಿ ದುಡಿಮೆಯಿಂದ ಮನೆಗಳನ್ನು ನಿಲ್ಲಿಸಿದ ಅವರಿಗ ಸಹಜವಾಗಿ ಕುಟುಂಬದಲ್ಲಿ ಅವರ ಹಕ್ಕಿನ ಜಾಗವಿದೆ, ಸ್ವಾತಂತ್ರ್ಯವಿದೆ.

ಮಧ್ಯಮ ಹಾಗೂ ಕೆಳಜಾತಿ-ಕೆಳವರ್ಗಗಳ ಹೆಂಗಸರು ಈ ಕಾದಂಬರಿಯ ಕೇಂದ್ರವಾಗಿಲ್ಲದಿದ್ದರೂ ಪೂರಕವಾಗಿ ಬರುವ ಅವರ ಬದುಕಿನ ವಿವರಗಳು, ಅನುಭವಗಳು ಸಾಕಷ್ಟಿವೆ. ಕೊಂದಿಷ್ಟು ಆರ್ಥಿಕ ನೆಲೆಯುಳ್ಳ ಮಧ್ಯಮ ಜಾತಿಗಳ ಹೆಂಗಸರಲ್ಲಿ ಬುಂಡಮ್ಮನಂಥವರೂ ಇದ್ದಾರೆ, ಅತಿ ಕಠಿಣವಾದ ಬದುಕನ್ನು ಚಲದಿಂದ, ಧೈರ್ಯದಿಂದ ಆಕೆ ಎದುರಿಸಿದ್ದಾಳೆ. ಅನ್ಯಾಯದ ವಿರುದ್ಧ ದನಿಯೆತ್ತುವ ಧೈರ್ಯವಿದೆ, ಯಾರಿಗೂ ಅಂಜದೆ ಬದುಕು ನಡೆಸಿದ್ದಾಳೆ, ತನ್ನ ಮಿತಿಯಲ್ಲೇ ಮಾನವೀಯ ಅನುಕಂಪ ಜೀವನೋತ್ಸಾಹಗಳಿಂದ ಮಿಡಿದಿದ್ದಾಳೆ. ಕೆಳ ಜಾತಿ-ವರ್ಗಗಳನ್ನು ಗಂಡಸರಿಗೆ ಕಡಿಮೆಯಿಲ್ಲದ ಅನುಕಂಪರಾಹಿತ್ಯದಿಂದ ಕಂಡ ಸಂಪಿಗಮ್ಮ, ಸಿದ್ಧಮ್ಮನಂಥವರೂ ಇದ್ದಾರೆ. ಹೆಣ್ಣಿನ ಹಿಡಿಯಾಸೆಯುಳ್ಳ ಗಂಡನನ್ನು ಕೊತ್ತಮರಿಯಂತೆ ವಿದೇಯವಾಗಿಸಿಕೊಂಡು ತನಗಿಷ್ಟ ಬಂದ ಬದುಕನ್ನು ಮುಚ್ಚುಮರೆಯಿಲ್ಲದೆ ನಡೆಸಿದ ಕೆಂಗಣ್ಣಪ್ಪನ ಹೆಂಡತಿ ಸಿದ್ಧಮ್ಮ ಮತ್ತೊಂದು ಮಾದರಿ, ಆಸ್ತಿಯುಳ್ಳವರು ಹೊರಗಿನ ದುಡಿಮೆ ಮಾಡಿದರೂ ಕೆಳಜಾತಿ-ವರ್ಗಗಳ ಹೆಂಗಸರಂತೆ ತಮ್ಮ ಬದುಕಿಗಾಗಿ ಸಂಭ್ರಮ ಉತ್ಸವಗಳನ್ನು ನೆಚ್ಚಿದವರಲ್ಲ. ಹೊರಗಿನ ದುಡಿಮೆಯಿಂದ ಮನೆಯ ಹೊರಗಿನ ಆಗುಹೋಗುಗಳ ಸಂಪರ್ಕ, ಸಾಮಾಜಿಕ ಜೀವನದಲ್ಲಿ ಒಂದಿಷ್ಟು ಇಣುಕುವ ಅವಕಾಶ ಇವರಿಗಿದೆ, ಎಂಥ ಅನುಭವ, ವಿವೇಕಗಳಿದ್ದರೂ, ಇವರು ಪಂಚಾಯ್ತಿಯ ನ್ಯಾಯಗಾರರಾಗಲು ಆಗದಿದ್ದರೂ ನ್ಯಾಯ ಪಡೆಯುವಲ್ಲಿ ಓಕರಬಹುದು. ನ್ಯಾಯದ ಮೇಲೆ ಪ್ರಭಾವ ಬೀರಲಾಗದಿದ್ದರೂ ತಮ್ಮಷ್ಟಕ್ಕೆ ತಾವೇ ನಡೆದುದಕ್ಕೆ ಪ್ರತಿಕ್ರಿಯಿಸಬಹುದು.

ಮದುವೆಯ ಚೌಕಟ್ಟಿನ ಕ್ರೌರ್ಯ, ವಂಚನೆಗೆ ಒಳಗಾಗಿ ತನ್ನ ರಟ್ಟೆಗಳನ್ನೇ ನೆಚ್ಚಿ ದುಡಿಯುತ್ತಾ ವ್ಯವಸ್ಥೆಯ ಸಾಮಾಜಿಕ, ಆರ್ಥಿಕ, ತುಳಿತದ ಶ್ರೇಣಿಯ ತೀರ ಕೆಳಶ್ರೇಣಿಗೆ ಸಿಕ್ಕಿಕೊಂಡ ದಲಿಚ ಹೆಣ್ಣುಗಳಲ್ಲಿ ಒಬ್ಬಳು ಸಿವುನಿ. ಕಾದಂಬರಿಯುದ್ದಕ್ಕೂ ಶೋಷಣೆಗೊಳಗಾದ ಲಕ್ಕನೂ ಸಿವುನಿಗಿಂತ ಮೇಲಿನ ಮಟ್ಟದಲ್ಲಿದ್ದಾನೆ. ಜೀವನ ಅವಳನ್ನು ತೀರ ಹಣ್ಣಾಗಿಸಿದ ಮುನ್ನ ಉಳಿದವರಿಗಿಂತ ಹೆಚ್ಚು ಉಗ್ರವಾಗಿಯೇ ಪ್ರತಿಭಟಿಸುತ್ತಾ ಬಂದಳು. ಗಂಡನ ವಿರುದ್ಧ ಸಂಪಿಗೆಯಮ್ಮನಂಥ ತನ್ನನ್ನು ತುಳಿಯುವ ಮೇಲು ಜಾತಿ ವರ್ಗದ ಹೆಂಗಸರ ವಿರುದ್ಧ, ಕೇಶವಯ್ಯನಂಥ ಗಂಡಸಿನ ವಿರುದ್ಧ ದನಿಯೆತ್ತಿದವಳು ಅವಳು. ಆದರೆ ಬುಂಡಮ್ಮನಿಗಿದ್ದಂತೆ ನಿಲ್ಲಲು ಒಂದಿಷ್ಟು ನೆಲೆಯಿಲ್ಲದೆ ಮಗುವಿನ ತಾಯಾದ ಅವಳ ಪ್ರತಿಭಟನೆಯ ದನಿಯನ್ನು ತಾಯಿಯ ಸಾವು, ತಂದೆಯ ಸಾವಿನಂಥ ಬದುಕು, ಅಣ್ಣನ ಗಡೀಪಾರು ತಗ್ಗಿಸಿದವು. ಬದುಕಲು ಯಾವುದೋ ಒಂದು ರಹದಾರಿಯನ್ನು ಹಿಡಿಯಲೇಬೇಕಾದ ಪರಿಸ್ಥಿತಿಗೆ ಈ ಘಟನೆಗಳು ಅವಳನ್ನು ತಂದು ನಿಲ್ಲಿಸಿದವು. ಯಾವ ಕೇಶವಯ್ಯನನ್ನು ಪ್ರತಿಭಟಿಸಿದ್ದಳೋ ಅವನ್ನೇ ಅಂಥವರನ್ನೇ ಓಲೈಸಬೇಕಾಯಿತು.

ಸಿವುನಿಯನ್ನು ವ್ಯವಸ್ಥೆ ಒಂದು ರೀತಿ ಹಣ್ಣು ಮಾಡಿದರೆ ಒಂದಿಷ್ಟು ನೆಲೆಯದ್ದು ದನಿಯೆತ್ತಿದ ಗಂಗೆ ಯಂಥವರನ್ನು ಮತ್ತೊಂದು ರೀತಿಯಲ್ಲಿ ಹಣ್ಣು ಮಾಡಿತು. "ಎಣ್ಣು ಎಂಗಸು ಮೀಸೆ

ಹೊತ್ತವನ ಮೇಲೆ ಕೈ ಮಾಡಬಾರದು" ಎಂಬ ನಿಯಮವನ್ನು ಗಂಗೆ ಮುರಿಯದಿದ್ದರೂ ನಾಲಗೆಯನ್ನೇ ತನ್ನ ಅಸ್ತ್ರವಾಗಿ ಬಳಸಿದಳು. ನಂಜೇಗೌಡನ ಸಂಚಿನಿಂದ ತಪ್ಪಿಲ್ಲದೆಯೂ ದಂಡವನ್ನು ತಪ್ಪೊಪ್ಪಿಗೆಯನ್ನೂ ಮೈಯನ್ನೂ ಅವಳು ತೆರಬೇಕಾಯಿತು. ಒಂದಲ್ಲ ಒಂದು ರೀತಿಯಲ್ಲಿ ಕಟ್ಟು ಪಾಡುಗಳನ್ನು ಮುರಿದು ಸಿವುನಿ ಗಂಗಿ ರುಕ್ಮಿಣಿ ಈ ಮೂವರನ್ನು ವ್ಯವಸ್ಥೆ ಮೂರು ರೀತಿಯಲ್ಲಿ ಬಗ್ಗಿಸಿತು. ಗತಿ ಕಾಣಿಸಿತು. ಸಿವುನಿ, ಗಂಗಿ ವ್ಯವಸ್ಥೆಯಲ್ಲಿ ಕರಗಿ ಹೋದರು, ರುಕ್ಮಿಣಿ ಕಣ್ಮರೆಯಾದಳು.

ವೈವಾಹಿಕ ಚೌಕಟ್ಟು ಕೂಡ ಮಹಿಳೆಯರ ಜೀವನ ಸ್ವರೂಪ ಧೋರಣೆಗಳನ್ನು ರೂಪಿಸುವ ಒಂದು ನಿರ್ಣಾಯಕ ಅಂಶವಾಗಿದೆ. ಯಾವುದಾದರೊಂದು ಕಾರಣದಿಂದ ಗಂಡನೆ ಆಸರೆ ತಪ್ಪಿ, ಬದುಕನ್ನು ಎದುರಿಸುವಾಗ ಮಹಿಳೆ ಹಿಂದೆಂದಿಗಿಂತ ಧೈರ್ಯವಂತೆಯೂ ಕ್ರಿಯಾಶಾಲಿಯೂ ಆಗಿದ್ದಾಳೆ. ಹೆಂಗಸಿನ ಕರ್ತೃತ್ವಸಕ್ತಿ ತನಗೆ ದೊರೆತ ಈ ಹೊಸ ಸ್ವಾತಂತ್ರ್ಯದಲ್ಲಿ ಚಿಗುರುವುದೂ ಉಂಟು. 'ವೈಶಾಖ' ಕಾದಂಬರಿಯ ಬೆಳಕು ವಿಶೇಷವಾಗಿ ವಿಧವೆಯರ ಗಂಡನನ್ನು ಬಿಟ್ಟವರ ಇಲ್ಲವೆ ಗಂಡನ ಬೆಂಬಲ ಹೆಚ್ಚಾಗಿಲ್ಲದ ಮಹಿಳೆಯರ ಮೇಲೆ ಬಿದ್ದಿದೆ. ವಿವಾಹದ ಚೌಕಟ್ಟಿನೊಳಗೆ ಸದ್ದಿಲ್ಲದೆ ಬದುಕುವ ಪಾತು-ಪಾತುಗಳಿದ್ದಾರೆ. ಆದರೆ ಅಂಥವರ ಬದುಕು ಈ ಕಾದಂಬರಿಯಲ್ಲಿ ವಿಶೇ,ವಾಗಿ ತೆರೆದುಕೊಂಡಿಲ್ಲ. ಬುಂಡಮ್ಮನೂ ರುಕ್ಮಿಣಿಯಂತೆ ವಿಧವೆಯಾದವಳು. ಆದರೆ ಅವಳ ಪಾಲಿಗೆ ವೈದವ್ಯ ತಂದ ಸ್ವಾತಂತ್ರ್ಯ ಜವಾಬ್ದಾರಿಯೇ ಬೇರೆ. ತನ್ನನ್ನು ತಾನು ನೋಡಿಕೊಳ್ಳುವುದಷ್ಟೇ ಅಲ್ಲದೆ ತನ್ನ ಚಿಕ್ಕ ಮಗುವನ್ನೂ ಬೆಳೆಸಬೇಕಾಗಿತ್ತು. ಗಂಡ ಹೋದ ಬೆಳೆಸಿದ ಮಗ ಭಂಗಿಯ ಪಾಲದ, ಬಂದ ಸೊಸೆ ಓಡಿ ಹೋದಳು, ಸಾಕಿದ ಎಮ್ಮೆಗಳು ಹುಲಿಯ ಬಾಯಿ ಸೇರಿದವು. ಇಂಥ ಎಲ್ಲ ಘಟನೆಗಳೂ ಅವಳನ್ನು ಇನ್ನಷ್ಟು ಮತ್ತಷ್ಟು ಗಟ್ಟಿಗೊಳಿಸಿದವು. ವೈಧವ್ಯ ತಂದುಕೊಟ್ಟ ಸ್ವಾತಂತ್ರ್ಯದಲ್ಲಿ ಲಕ್ಕ, ಗತಿಸಿದ ಗಂಡನನ್ನು ಬಯ್ಯುತ್ತಾ, ಮತ್ತಿತರ ಹಾಸಿಕಾರಕ ಚಿಲ್ಲರೆ ಕೆಲಸಗಳನ್ನು ಮಾಡುತ್ತಿದ್ದಾಳೆ. ಇವರೆಲ್ಲರ ಮೇಲೆ ಬಿದ್ದ ಸ್ವಾತಂತ್ರ್ಯ ಜವಾಬ್ದಾರಿಗಳು ರುಕ್ಮಿಣಿಯ ಮೇಲೆ ಬೀಳಲಿಲ್ಲ. ವಿಧವೆಯಾದರೂ ಮಾವನ ಆಶ್ರಯವಿತ್ತು. ಗಂಡನನ್ನು ಬಿಟ್ಟು ಬಂದ ಸಿವುನಿ, ಭಂಗಿಯ ಭಕ್ತನನ್ನು ಗಂಡನನ್ನಾಗಿ ಪಡೆದ ಬುಂಡಮ್ಮನ ಸೊಸೆ ವಿಧವೆಯಾದ ವೆಂಕ್ಟಿ ಪುರುಷತ್ವವನ್ನು ಕಳೆದುಕೊಂಡವನ ಹೆಂಡತಿಯಾದ ಸಿದ್ದಮ್ಮ ಇಂಥ ಅನೇಕರು ತಮ್ಮ ಲೈಂಗಿಕ ಸಂಬಂಧಗಳ ವಿಷಯದಲ್ಲಿ ಸಮಾಜ ವಿಧಿಸಿದ ಚೌಕಟ್ಟನ್ನು ಉಲ್ಲಂಘಿಸಿದ್ದಾರೆ. ಇವರ ಸಂಬಂಧಗಳು ಅಂಗೀಕೃತವಲ್ಲವಾದರೂ ಅಕ್ಷಮ್ಯವಲ್ಲ. ಅದರ ಸಲುವಾಗಿ ಈ ಯಾರು ಜೀವ ಕಳೆದುಕೊಳ್ಳುವ ಯೋಚನೆ ಮಾಡಲಿಲ್ಲ. ಆದರೆ ರುಕ್ಮಿಣಿಯ ಹಿನ್ನಲೆ ಅವಳ ಉಲ್ಲಂಘನೆಯನ್ನು ಕಟು ವಿಮರ್ಶೆಗೆ ಗುರಿಯಾಗಿಸಿ ಅಸಹಾಯಕಳನ್ನಾಗಿಸಿ ಬದುಕನ್ನೇ ತ್ಯಜಿಸುವಂತೆ ಮಾಡಿತು.

ಬ್ರಾಹ್ಮಣ ಸಮಾಜದ ಮೌಲ್ಯಗಳ ಸಾಲಿನಲ್ಲಿ ತನ್ನನ್ನು ತಾನೇ ಸುತ್ತಿಕೊಂಡು ಸಾಯುವ ಮಹಿಳೆಯ ದುರಂತ. ಮಧ್ಯಮ. ಕೆಳ ಜಾತಿ-ವರ್ಗಗಳ ಮಹಿಳೆಯ ಮೇಲಿರುವ ಸಾಮಾಜಿಕ.

ಆರ್ಥಿಕ ಒತ್ತಡ, ಈ ಎಲ್ಲ ಮಹಿಳೆಯರೂ ಮಹಿಳೆಯರಾದ ಕಾರಣಕ್ಕೆ ಇವರು ಎದುರಿಸಬೇಕಾಗಿರುವ ಕೌಟುಂಬಿಕ, ಸಾಮಾಜಿಕ ತುಳಿತ ಇವೆಲ್ಲದರ ಪರಿವೆ ಆ ಕುರಿತು ನೋವು ಈ ಕಾದಂಬರಿಯಲ್ಲಿದೆ. ಆದರೆ ಸ್ವತಃ ಒಂದಲ್ಲ ಒಂದು ಬಗೆಯ ತುಳಿತಕ್ಕೆ ತಾನೇ ಒಳಗಾಗಿದ್ದರೂ ಪರಿಸ್ಥಿತಿ ಅವಕಾಶ ಕೊಟ್ಟರೆ ಮಹಿಳೆಯೂ ಶೋಷಿತಳಾಗುವುದು ಸಾಧ್ಯ. ನಮ್ಮ ಜಾತಿ-ವರ್ಗ ವ್ಯವಸ್ಥೆಯಲ್ಲಂತೂ ಇದಕ್ಕೆ ವಿಪುಲ ಅವಕಾಶಗಳಿರುವ ವಸ್ತುಸ್ಥಿತಿಯನ್ನು 'ವೈಶಾಖ'ವು ಅನೇಕ ಸಂದರ್ಭಗಳಲ್ಲಿ ಧ್ವನಿಸಿದೆ. 'ಸಿವಾಚಾರದ' ಗಂಗಿಯು ತನಗಿಂತ ವಯಸ್ಸು, ಜಾತಿ, ವರ್ಗ, ದೈಹಿಕ ಬೆಳವಣಿಗೆಯಲ್ಲಿ ಕೆಳಗಿದ್ದ ಲಕ್ಕನೊಂದಿಗೆ ಅವನ ಗೊರಗಿನೊಳಗೇ ಶಾಲೆಗೆ ಹೋದವಳು, ತನ್ನ ಲೈಂಗಿಕ ಅಪೇಕ್ಷೆಗೆ ಲಕ್ಕನನ್ನು ಬಳಸಿಕೊಂಡವಳು. ಆದರೆ ಗರತಿಯಾಗಿ ತಾಯಾದ ಮೇಲೆ ಗಂಗವ್ವನಾದೆ ಇಡೀ ಗಂಗಿ ತನ್ನ ಪಡಸಾಲೆಯೊಳಗೆ ಕಾಲಿಟ್ಟನೆಂದು ಲಕ್ಕನ ಮೇಲೆ ಹರಿಹಾಯುತ್ತಾಳೆ. ನಿನ್ನ ಜಾತಿಯೇನು? ನನ್ನ ಜಾತಿಯೇನು? ಎಂದು ಕೂಗಾಡುತ್ತಾಳೆ. ಅತ್ಯಾಚಾರಕ್ಕೊಳಗಾದ ಜಾನಕಿ ತನ್ನ ಜಾತಿಯೊಳಗೇ ತನಗೆ ಮದುವೆ ಗೊತ್ತಾದ ಮೇಲೆ ರುಕ್ಮಿಣಿಯು ತನಗಿಂತ ಹಿರಿಯಳು. ಆಪತ್ತಿನಲ್ಲಿ ನೆರವಾದವಳು ಎಂಬುದಾವುದನ್ನೂ ನೆನಪಿಸಿಕೊಳ್ಳದೆ ಈಗ ಅಕ್ರಮಸಂಬಂಧ ಹೊಂದಿದವಳೆಂದು ಅವಳನ್ನು ತಾತ್ಸಾರದಿಂದ ನೋಡುತ್ತಾಳೆ. ಕೆಂಗಣ್ಣಪ್ಪನ ಹೆಂಡತಿ ಸಿದ್ಧಮ್ಮ ಕೆಳಜಾತಿವರ್ಗಗಳ ಮೇಲೆ ಅಮಾನವೀಯತೆಯನ್ನು ತೋರುವಲ್ಲಿ ಗಂಡನನ್ನು ಮೀರಿಸಿದ್ದಾಳೆ. ಹಣದ ಮುಂದೆ ಮನುಷತ್ವವನ್ನು ತೃಣವೆಂದು ತಿಳಿಯುತ್ತಾಳೆ. ನೆಲಕಚ್ಚವಂತೆ ನಂಜೇಗೌಡ ತನ್ನ ಹೆಂಡತಿ ಗೌರಮ್ಮನನ್ನು ಹೊಡೆಯುತ್ತಿದ್ದ ಆ ಸುದ್ದಿಯನ್ನು ಗುಟ್ಟಾಗಿಡಲು ಅವಳಿಗೆ ಒಡವೆಗಳನ್ನು ಮಾಡಿಸುತ್ತಿದ್ದ ಒಡವೆಗಳ ಆಸೆಯಿಂದಾಗಿ ಗೌರಮ್ಮ "ದ್ಯಾವರೆ ಅವರ ಏಟು ಈವತ್ತು ಜೋರಾಗಿ ಬೀಳಲಂತ ಪಾರ್ತನೆ ಮಾಡುತ್ತಿದ್ದಳು. 'ವೈಶಾಖ' ಇರುವ ವಸ್ತು ಸತ್ಯದ ನಿಷ್ಠೆಯನ್ನು ಈ ಎಲ್ಲ ಸಂಗತಿಗಳೂ ಕಾಣಿಸುತ್ತವೆ.

ಹೀಗೆ ವೈಶಾಖ ಕಾದಂಬರಿಯಲ್ಲಿ ಚದುರಂಗ ಅವರು ಜಾತಿ ಶ್ರೇಣಿ ವರ್ಗ ವಲಯಗಳನ್ನು ಮಹಿಳೆಯರ ಮತ್ತು ದಲಿತರ ಬದುಕಿನ ವಿವರಗಳನ್ನು ಘಟನೆಗಳ ಮೂಲಕ ಹೆಚ್ಚು ಸಾಂಕೇತಿಕವಾಗಿ ಹಿಡಿದಿಟ್ಟಿದ್ದಾರೆ.

## ಅಡಿ ಟಿಪ್ಪಣಿಗಳು

೧. ಡಾ. ಕೆ. ವಿ. ನಾರಾಯಣ, ವೈಶಾಖ, ವೈಶಾಖದ ವೈವಿಧ್ಯತೆಗಳು, ಸಂ. ಡಾ. ಬಸವರಾಜ ಸಬರದ

೨. ವೈಶಾಖ, ಪು. ೧೪

೩. ವೈಶಾಖ, ಪು. ೧೧೨

೪. ವೈಶಾಖ, ಪು. ೧೪

೫ ವೈಶಾಖ, ಪು. ೧೭೧

೬. ವೈಶಾಖ, ಪು. ೧೬೧

೭. ಅದೇ. ಪು. ೧೬೧

# ಅಧ್ಯಾಯ ಮೂರು

## ವೈಶಾಖ : ಸಾಮಾಜಿಕ ಆಯಾಮ

ಮನುಷ್ಯ ಆರಂಭದಿಂದಲೂ ಸಂಘಜೀವಿಯಾಗಿದ್ದಾನೆ. ಮನುಷ್ಯನ ಮೆದುಳಿನ ವಿಕಾಸದೊಂದಿಗೆ ಸಾಮಾಜಿಕತೆಯು ವಿಕಾಸ ಹೊಂದುತ್ತಾ ಬಂದಿದೆ. ಮನುಷ್ಯನ ಹುಟ್ಟಿನ ಕುರಿತಾದಂತಹ ಡಾರ್ವಿನ್ನನ ವಿಕಾಸವಾದವನ್ನೇ ಪರಿಗಣಿಸದಾಗ್ಯೂ ಮನುಷ್ಯ ನಾಗರಿಕತೆಯನ್ನು ನಿರ್ಮಿಸಿಕೊಂಡುದುದರ ಹಿಂದೆ ಈ ಸಾಮಾಜಿಕತೆಯ ಹಸ್ತವಿದೆಯೆಂದರೂ ತಪ್ಪಾಗಲಿಕ್ಕಿಲ್ಲ. ಕಾಡಿನಲ್ಲಿ ಗಡ್ಡೆಗೆಣಸುಗಳನ್ನು ಅಗೆಯುತ್ತಾ, ಬೇಟೆಯಾಡುತ್ತಾ, ಅಲೆಮಾರಿ ಜೀವನದೊಂದಿಗೆ ಇದ್ದ ಮನುಷ್ಯ ಕ್ರಮೇಣ ಕೌಟುಂಬಿಕ ಜೀವನವನ್ನು ಗಟ್ಟಿಗೊಳಿಸಿಕೊಂಡ. ಕುಟುಂಬಗಳು ಒಂದೆಡೆ ನೆಲೆನಿಲ್ಲಲಾರಂಭಸಿದವು. ಕೃಷಿ ಮತ್ತು ಹೈನುಗಾರಿಕೆಯಂತಹ ಪ್ರಕ್ರಿಯೆಗಳು ಮನುಷ್ಯನ ಆಹಾರಕ್ಕಾಗಿನ ಅಲೆತವನ್ನು ಬಹುಮಟ್ಟಿಗೆ ತಪ್ಪಿಸದವೆಂದೇ ಹೇಳಬೇಕಾಗುತ್ತದೆ. ಕೃಷಿ, ಹೈನುಗಾರಿಕೆ, ಬೇಟೆ ಎಲ್ಲದಕ್ಕೂ ಪೂರಕವಾಗಿ ಒಬ್ಬರಿಂದ ಮತ್ತೊಬ್ಬರು ಸಹಾಯ ಪಡೆಯಬೇಕಾಯಿತು. ಒಂದೆಡೆ ನೆಲೆನಿಂತ ಕುಟುಂಬಗಳು ಒಂದು ಗೂಡಿ ಊರು ನಿರ್ಮಾಣವಾಯಿತು. ಈ ಬಗೆಯ ವಿಕಾಸಶೀಲತೆಯ ಒಡಲಲ್ಲೇ ಸಾಮಾಜಿಕತೆಯ ಬೀಜಗಳು ಮೊಳಕೆಯೊಡೆದವೆಂದು ಹೇಳಬಹುದು. ಮನುಷ್ಯ ನಿರ್ಮಿಸಿಕೊಂಡ ಸಾಮಾಜಿಕತೆಯು ಅವನ ಬದುಕಿಗೆ ಪೂರಕವಾಗಿತ್ತು. ಅವನ ನಿಸರ್ಗದತ್ತ ಬದುಕು ಕ್ರಮೇಣ ನಾಗರಿಕತೆಯ ಕಡೆಗೆ ಪಯಣಿಸುವಾಗಲಂತೂ ಈ ಅವಶ್ಯಕತೆ ಮತ್ತಷ್ಟು ಹೆಚ್ಚಾಯಿತು. ಅಲೆಮಾರಿಯ ಅವಸ್ಥೆಯಿಂದ ಸಂಘಜೀವಿಯಾದ ಮಾನವ ಸಾಮಾಜಿಕ ಜೀವಿಯೂ ಆದ. ಈ ರೀತಿಯಾಗಿ ಅಸ್ತಿತ್ವಕ್ಕೆ ಬಂದ ಸಾಮಾಜಿಕ ಬದುಕು ವರ್ಗ, ಜಾತಿ, ವರ್ಣ, ಭಾಷೆ ಮುಂತಾದವುಗಳಿಂದ ಛಿದ್ರತೆಗೆ ಒಳಗಬೇಕಾದ ಸಂದರ್ಭಗಳೂ ಬಂದವು.

ವಿಶೇಷವಾಗಿ ನಮ್ಮ ಭಾರತೀಯ ಸಾಮಾಜಿಕ ಸಂದರ್ಭದಲ್ಲಂತೂ ಇಂತಹ ಒಡಕುಗಳು, ಛಿದ್ರತೆಗಳು ಸರ್ವೇ ಸಾಮಾನ್ಯವಾದವು. ವೈಶಾಖ ಕಾದಂಬರಿಯು ಭಾರತದ ಗ್ರಾಮೀಣ ಜಗತ್ತನ್ನು ಕಲಾತ್ಮಕವಾಗಿ ಆವಿಷ್ಕರಿಸಿದಂತೆಯೇ ನಮ್ಮ ಸಾಮಾಜಿಕ ಜಗತ್ತನ್ನೂ

ಅರ್ಥಪೂರ್ಣವಾಗಿ ಆವಿಷ್ಕರಿಸುತ್ತದೆ. ಮನು ಧರ್ಮ ಪ್ರಣೀತ ವ್ಯವಸ್ಥೆಯು ಮನುಷ್ಯ ಮನುಷ್ಯರ ನಡುವೆ ಕೃತ್ರಿಮವಾದ ಕಂದಕಗಳನ್ನು ನಿರ್ಮಿಸಿತ್ತು. ಇಡೀ ಭಾರತೀಯ ಸಮಾಜ ವ್ಯವಸ್ಥೆಯು ವರ್ಗ, ವರ್ಣ, ಜಾತಿಯ ಆಧಾರದಲ್ಲಿ ಭಿನ್ನಾಭಿನ್ನವಾಗಿತ್ತು. ಕ್ಷತ್ರಿಯ, ಬ್ರಾಹ್ಮಣರನ್ನೊಳಗೊಂಡ ಆಳ್ವಿಕೆಯ ಪುರೋಹಿತಶಾಹಿ ವರ್ಗವು ತನ್ನ ಹಿತಾಸಕ್ತಿಗಾಗಿ ವೈಶ್ಯ ಶೂದ್ರ ಮತ್ತು ಅಸ್ಪೃಶ್ಯ ಜಾತಿಗಳನ್ನು ಪ್ರತ್ಯೇಕಿಸಿ ಒಟ್ಟು ಸಮಾಜವನ್ನು ವಿಂಗಡಿಸಿಹಾಕಿತ್ತು. ಧರ್ಮ, ನೀತಿ ಸಂಹಿತೆಯು ಕೇವಲ ಸ್ವಹಿತಾಸಕ್ತಿಯನ್ನು ಕಾಪಾಡುವ ಅಂಶಗಳಾಗಿ ಶೋಷಣೆಯ ಅಸ್ತ್ರಗಳಾಗಿ ಮಾರ್ಪಟ್ಟಿದ್ದವು. ನಮ್ಮ ಸಾಮಾಜಿಕ ಸಂರಚನೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅದು ಈ ಬಗೆಯ ಕೃತ್ರಿಮ ಕಟ್ಟುಪಾಡುಗಳನ್ನು, ವೈರುಧ್ಯಗಳನ್ನು ವಿರೋಧಿಸುವುದರ ಮೂಲಕ ಸಂಘರ್ಷದ ಹಾದಿಯಲ್ಲಿ ಪಯಣಿಸಿರುವುದನ್ನು ನಾವು ಗಮನಿಸಬಹುದು. ಇಂತಹುದೇ ಸಾಮಾಜಿಕ ಬದುಕಿನ ಆಯಾಮಗಳನ್ನು ಚದುರಂಗ ಅವರ ವೈಶಾಖ ಕಾದಂಬರಿಯು ಚಿತ್ರಿಸಿರುವುದನ್ನು ಗಮನಿಸಬಹುದಾಗಿದೆ.

"ತಮ್ಮಲ್ಲಿ ಹುದುಗಿದ ನೇರ ಅಭಿವ್ಯಕ್ತಿ ಶಕ್ತಿ, ಜೀವನ ಸಂಪರ್ಕ, ಚಿಕಿತ್ಸಕ ಪ್ರಜ್ಞೆಗಳಿಂದಾಗಿ ಕನ್ನಡ ಕಾದಂಬರಿಗಳು ಇತ್ತೀಚಿಗೆ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟ ಪಡೆಯುತ್ತಿವೆ. ಸಾಮಾಜಿಕ ಕಾದಂಬರಿಗಳಿಗಂತೂ ಈ ಮಾತು ಪ್ರತಿಶತ ಅನ್ವಯವಾಗುತ್ತದೆ. ಸಮಾಜ ಜೀವನವನ್ನು ಆಯಾ ಸಂದರ್ಭದ ಜೀವಂತಿಕೆಯೊಂದಿಗೆ ಚಿತ್ರಿಸುವಲ್ಲಿ ಕಾದಂಬರಿಕಾರ ಕವಿಗಿಂತ ಹೆಚ್ಚು ಮುಕ್ತನಾಗಿ ಕಾರ್ಯ ನಿರ್ವಹಿಸುತ್ತಾನೆ. ಕಾದಂಬರಿಗಳಲ್ಲಿ ಶಿಷ್ಟ ಸಮಾಜವನ್ನು ಕುರಿತ ಕೃತಿಗಳು ಹಾಗೂ ಜನಪದ ಸಮಾಜವನ್ನು ಕುರಿತ ಕೃತಿಗಳು ಎಂದು ಮತ್ತೆ ವಿಭಜಿಸಿ ನೋಡಬಹುದು. ವಿಶೇಷವಾಗಿ ಜನಪದ ಸಮಾಜ ಹಾಗೂ ಸಾಮಾಜಿಕ ಪರಿಸರವನ್ನು ಕುರಿತು ರಚಿಸಲಾದ ಗ್ರಾಮಾಯಣ, ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು, ನಿಸರ್ಗ ಮುಂತಾದ ಕೃತಿಗಳು ಎರಡನೆಯ ಭಾಗದಲ್ಲಿ ಪ್ರಸಿದ್ಧಿ ಪಡೆದವು. ಈ ಮಾಲಿಕೆಯಲ್ಲಿ ಧೈರ್ಯದಿಂದ ಸೇರಿಸಬಹುದಾದ ಕೃತಿಯೆಂದರೆ ೧೯೮೦ ರಲ್ಲಿ ಪ್ರಕಟಗೊಂಡ ಚದುರಂಗರ ಕಾದಂಬರಿ ವೈಶಾಖ ಕಾದಂಬರಿಯಾಗಿದೆ.

ಪ್ರದೇಶವೊಂದರ, ಲೋಕ ಜೀವನಕ್ಕೆ ಚದುರಂಗರು ಒಡ್ಡಿದ ವಿಚಾರ ವಿಮರ್ಶಾ ದರ್ಪಣವೇ ವೈಶಾಖ ಕಾದಂಬರಿಯ ಹಮ್ಮು-ಹರವುಗಳನ್ನು ನೋಡಿದಾಗ ಇದು ಸುಮಾರು ವರ್ಷಗಳಿಂದ ಲೇಖಕರ ಮನದಲ್ಲಿ ಸುತ್ತಿ ಸುಳಿಯುತ್ತಿದ್ದ ಸಂಕೀರ್ಣ ವಿಚಾರಗಳ ಮೊತ್ತ ಎಂಬುದು ಓದುಗರಿಗೆ ಭಾಸವಾಗದಿರದು. ಕಾದಂಬರಿಯ ವಿಷಯ ವಿಸ್ತಾರವೇ ಲೇಖಕರ ಜೀವನಾನುಭವ ವಿಸ್ತಾರವು ಆಗಿದೆಯೆಂಬ ಮಾತನ್ನು ಈ ಸಂದರ್ಭದಲ್ಲಿ ಒತ್ತಿ ಹೇಳಬಹುದು.

ವಿಮರ್ಶಕರಿಂದ ಗ್ರಾಮಭಾರತವೆಂದೇ ಕರೆಯಿಸಿಕೊಂಡಿರುವ ವೈಶಾಖದಲ್ಲಿ ಗ್ರಾಮೀಣ ಬದುಕಿನ ವಾಸ್ತವ ಚಿತ್ರಣ ಹಾಗೂ ವಿಶ್ಲೇಷಣೆಗಳು ನಾವು ಗಮನಿಸಬೇಕಾದ ಎರಡು ಮಹತ್ವದ

ಅಂಶಗಳು. ಇಲ್ಲಿ ಚಿತ್ರಿತವಾದ ಸಮಾಜ ಕೇವಲ ಪ್ರಾತಿನಿಧಿಕ, ಅದರ ಹಿಂದೆ ಇಡೀ ಭಾರತದ ಗ್ರಾಮ ಸಮಾಜವೇ ವ್ಯಾಪಿಸಿ ನಿಂತಿದೆ. ಧರ್ಮ ಹಾಗೂ ದ್ರವ್ಯಗಳ ವಿಷಯದಲ್ಲಿ ತಲೆದೋರಿದ ಅಸಮಾನತೆಗಳು ಭಾರತಕ್ಕೆ ಬಡಿದುಕೊಂಡ ಪೀಡೆಗಳು. ಇದರಿಂದಾಗಿ ಮೇಲು-ಕೀಳೆಂಬ ವರ್ಗಗಳು. ಶೋಷಕರು-ಶೋಷಿತರು ಎಂಬ ಸ್ತರಗಳು ಹುಟ್ಟಿಕೊಂಡಿವೆ. ಇದೆಲ್ಲಾ ಹೀಗೇಕೆ ಎಂಬ ಪ್ರಶ್ನಾರ್ಥಕ ಮತಿ, ಇದು ಹೀಗಿರಬಾರದು ಎಂಬ ವಿವೇಕದ ನಿರ್ಧಾರ, ಬಿದ್ದವರನ್ನು ಎಬ್ಬಿಸಬೇಕು ಎಂಬ ಮಾನವೀಯ ಭಾವ ಇವು ಕಾದಂಬರಿಯ ಒಳತುಡಿತಗಳು.

ಕಾದಂಬರಿಯ ಪ್ರಮುಖ ಪಾತ್ರ ಹರಿಜನರ ಲಕ್ಕ. ಆತ ಭಾರತದ ಶೋಷಿತ ಕೋಟಿಯ ಪ್ರತಿನಿಧಿ. ಲಕ್ಕನ ಬದುಕಿನ ಏಳುಬೀಳುಗಳನ್ನು ಚಿತ್ರಿಸುವುದರೊಂದಿಗೆ ಲೇಖಕರು ಅದನ್ನು ಯಶಸ್ವಿಯಾಗಿ ಸಾಮಾನ್ಯೀಕರಣಗೊಳಿಸಿದ್ದಾರೆ. ಈ ವ್ಯಾಪಕ ದೃಷ್ಟಿಕೋನವೇ ಈ ಕಾದಂಬರಿಯ ಪರಿಣಾಮ-ಘನತೆಗಳನ್ನು ಇಮ್ಮಡಿಗೊಳಿಸಿದೆ.

ಲಕ್ಕ, ಬ್ರಾಹ್ಮಣ ಕೇರಿಯಲ್ಲಿ ದುಡಿಯುವಾತ. ಕೃಷ್ಣಶಾಸ್ತ್ರಿಗಳು ವ್ಯಾಪಾರಿಗಳ. ಅವರ ಮಗ ವಿಶ್ವ ರುಕ್ಮಿಣಿಯ ಪತಿ. ಲಗ್ನವಾದ ತೀವ್ರದಲ್ಲಿ ತೀರಿಹೋದ. ಇದುವೇ ರುಕ್ಮಿಣಿಗೆ ಕೇಶಮುಂಡನಾದಿ ಸಂಸ್ಕಾರ ಮಾಡಿಸಲು ಬ್ರಾಹ್ಮಣ ಸಮಾಜ ಹವಣಿಸಿದಾಗ ಕೃಷ್ಣ ಶಾಸ್ತ್ರಿಗಳು ಅದನ್ನು ಪ್ರತಿಭಟಿಸುತ್ತಾರೆ.ರುಕ್ಮಿಣಿ ಹೇಗೋ ಬದುಕುತ್ತಾಳೆ. ಹೀಗಿದ್ದಾಗ ಒಂದು ದಿನ ಮಾವ ಕೃಷ್ಣಶಾಸ್ತ್ರಿಗಳು ಸೊಸೆ ರುಕ್ಮಿಣಿಯನ್ನು ಭೋಗಿಸಿಬಿಡುತ್ತಾರೆ. ಪ್ರತಿಭಟಿಸುವ ಪರಿಸ್ಥಿತಿಯಾಗಲೀ, ಧೈರ್ಯವಾಗಲೀ ರುಕ್ಮಿಣಿಯಲ್ಲಿ ಉಳಿದಿರಲಿಲ್ಲ. ತಮ್ಮ ತಪ್ಪಿನ ಅರಿವಾದ ತಕ್ಷಣ ಕೃಷ್ಣಶಾಸ್ತ್ರಿಗಳ ಬದುಕು ವಿರಕ್ತಿಯ ಮಾರ್ಗ ಹಿಡಿಯುತ್ತದೆ. ದೇಹದ ರುಚಿಯುಂಡ ರುಕ್ಮಿಣಿ ಲಕ್ಕನನ್ನು ಒತ್ತಾಯಪೂರ್ವಕವಾಗಿ ತನ್ನ ದೇಹ ಸುಖಕ್ಕಾಗಿ ಬಳಸಿಕೊಳ್ಳುತ್ತಾಳೆ. ಆಕಾಶ ನೋಡಲು ನೂಕು ನುಗ್ಗಲು ಯಾಕೆ? ಎಂಬಂತೆ ಹಾದರದ ಸುದ್ದಿ ಹಬ್ಬಿಸಲು ಶ್ರಮಿಸಬೇಕೆ? ಸುದ್ದಿಯ ವಿಷಗಾಳಿ ಊರತುಂಬ ಬೀಸಿತು. ಲಕ್ಕ-ರುಕ್ಮಿಣಿಯರನ್ನು ಊರ ಜನ ಧಿಕ್ಕರಿಸಿದರು. ಕೃಷ್ಣಶಾಸ್ತ್ರಿಗಳಿಗೂ ಒಳಗೊಳಗೇ ಹರಳು ಕಡಿದ ಅನುಭವ. ಊರಿನ ಜನ, ವಿಶೇಷವಾಗಿ ಬ್ರಾಹ್ಮಣರು ಈ ದೋಷದ ಬಗ್ಗೆ ಪಂಚಾಯಿತಿ ಸೇರಿಸಿದರು. ಲಕ್ಕನನ್ನು ಊರು ಬಿಡಿಸಿದರು. ಮತ್ತೆ ರುಕ್ಮಿಣಿಯನ್ನು ಬ್ರಾಹ್ಮಣ ಸಂಸ್ಕಾರಗಳಿಗೆ ಗುರಿ ಮಾಡಬೇಕೆಂದು ಯೋಚಿಸಿದರು. ನಡೆಯಬಹುದಾದ ದುರಂತಕ್ಕೆ ಹೆದರಿ ರುಕ್ಮಿಣಿ ತಾನಾಗಿಯೇ ಊರು ಬಿಟ್ಟು ಹೋದಳು. ಊರ ಪಕ್ಕದ ಚಿತ್ರಮೂಲನ ಕೋಟೆಯಲ್ಲಿ ಅವಳ ಪ್ರೇತ ಕೂಗುತ್ತದೆ ಎಂಬ ಸುದ್ದಿ ಆಮೇಲೆ ಹಬ್ಬಿತು. ಇತ್ತ ಊರು ಬಿಟ್ಟ ಲಕ್ಕ ಗೋಸುಸಾಬಿಯ ಸಹೃದಯತೆಯಿಂದ ಪಕ್ಕದ ಹಳ್ಳಿ ಶಕುನಿಕೊಪ್ಪದಲ್ಲಿ ವಾಸಿಸಿದನು. ಲಕ್ಕನ ತಾಯಿ ತೀರಿದಳು. ತಂಗಿ ಶಿವುನಿಯ ನೆನಪಾಗಿ ಲಕ್ಕ ಊರಿಗೆ ಬಂದ. ಅವಳನ್ನು ಕೇಶವಯ್ಯನ ತೋಳ ತೆಕ್ಕೆಯಲ್ಲಿ ಕಂಡು ನಿರಾಶನಾದ. ನೊಂದು ಕಾಡಿನಲ್ಲಿ ನಡೆದ. ಬದುಕಿನಲ್ಲಿ

ಹತಾಶರಾದ ಕೃಷ್ಣಶಾಸ್ತ್ರಿಗಳು ಕಾಶಿಗೆ ಹೋಗಬಯಸಿದರಾದರೂ ತಂಗಿಯ ಮಗಳು ಪುಟ್ಟ ಸರಸಿಯ ಬಗ್ಗೆ ಯೋಚಿಸಿ ಮನ ಬದಲಾಯಿಸಿದರು. ಹೀಗೆ ಈ ಕಥೆಯ ತ್ರಿಕೋನದ ಮೂರು ಭುಜಗಳಂತಿರುವ ಲಕ್ಕ, ರುಕ್ಮಿಣಿ, ಕೃಷ್ಣಶಾಸ್ತ್ರಿಗಳು ಮೂರು ಕಡೆ ಅಗಲುವುದರೊಂದಿಗೆ ಕತೆ ಪರ್ಯಾವಸನಗೊಳ್ಳುತ್ತದೆ. ಹೀಗೆ ಹಳ್ಳಿಯೊಂದರ ದುರಂತ ಕತೆ ವೈಶಾಖದ್ದು.

ಮಹಾಭಾರತದ ಕುರುಕ್ಷೇತ್ರದಂತೆ ವೈಶಾಖದ ಕರ್ಮಕ್ಷೇತ್ರ ಧರ್ಮನಹಳ್ಳಿ. ವನವಾಸದ ಕಾಲಕ್ಕೆ ಪಾಂಡವರು ಇಲ್ಲಿ ತಂಗಿದ್ದಾರೆ ಎಂಬ ಮಾತು ಕೃತಿಯಲ್ಲಿ ಬರುತ್ತದೆ. ಊರ ಪಕ್ಕದ ಚಿತ್ರಮೂಲನ ಕೋಟೆ ದ್ರೋಣರಿಂದ ರಚಿತವಾದ ಚಕ್ರವ್ಯೂಹವನ್ನು ನೆನಪಿಸುವಂತದ್ದು. ಅಭೇದ್ಯವಾದ ಆ ಹಳೆಯ ಕೋಟೆ ಊರಿನ ಜಿಡ್ಡುಗಟ್ಟಿದ ಸಂಪ್ರದಾಯ ಹಾಗೂ ಸಾಂಸ್ಕೃತಿಕ ಸ್ಥಗಿತತೆ ಮತ್ತು ಸಂಕೋಲೆಯ ಸಂಕೇತ.

ವೈಶಾಖ ಶೋಷಣೆಯನ್ನು ಕುರಿತಾದ ಕೃತಿ. ಇಲ್ಲಿನ ನಾವು ಎದುರಿಸುವುದು ಮೇಲುಕೀಳು ಎಂಬ ಎರಡು ವರ್ಗಗಳನ್ನು; ಬ್ರಾಹ್ಮಣ-ಹರಿಜನ ಶಿವಾಚಾರದವರೆಂಬ ಮೂರು ಜಾತಿಗಳನ್ನು; ಧಾರ್ಮಿಕ, ಆರ್ಥಿಕ ಹಾಗೂ ಲೈಂಗಿಕ ಎಂಬ ಮೂರು ಬಗೆಯ ಶೋಷಣೆಗಳನ್ನು ಈ ವಿಷಯಗಳಿಗೆ ಹೊಂದಿಕೊಂಡಂತೆ ಇನ್ನೂ ಅನೇಕ ಪ್ರಸಂಗಗಳನ್ನು ನಾವು ಕಾಣುತ್ತೇವೆಯಾದರೂ ಅವೆಲ್ಲಾ ಮೂಲದ ಉದ್ದೇಶಕ್ಕೆ ಪೂರಕಗಳಾಗಿವೆ.

ಬ್ರಾಹ್ಮಣರು (ಉತ್ತಮರು), ವೀರಶೈವರು ಇವರಿಬ್ಬರು ಸಮಾಜದಲ್ಲಿ ಪ್ರತಿಷ್ಠಿತರು-ಮೇಲಿನವರು. ಹರಿಜನರಲ್ಲಿ ಗೌಣ - ಕೆಳಗಿನವರು. 'ಮೇಲಿನ ಜಾತಿಯ ಯಜಮಾನರು' ಕೆಳಗಿನವರನ್ನು ಮನಬಂದಂತೆ ಶೋಷಿಸುತ್ತಿದ್ದುದಕ್ಕೆ ಕಾದಂಬರಿ ಅನೇಕ ನಿದರ್ಶನಗಳನ್ನು ಒದಗಿಸುತ್ತದೆ. ಮೇಲೆ ತಿಳಿಸಲಾದ ಮೂರೂ ಬಗೆಯ ಶೋಷಣೆಗಳು ತುಂಬಾ ಮಹತ್ವವಾದವು : ಬ್ರಾಹ್ಮಣರ ಅತಿಯಾದ ಶಾಸ್ತ್ರಬದ್ಧ ಬದುಕು. ಮಡಿವಂತಿಕೆ ಹಾಗೂ ಇತರರನ್ನು ಕನಿಷ್ಟರಂತೆ ಕಾಣುವುದು ಇವು ಬಹಿರಂಗ ಧಾರ್ಮಿಕ ಶೋಷಣೆಯಾದರೆ, ತಪ್ಪು ಆಚರಣೆಗಳಿಂದಾಗಿ ಸ್ವಧರ್ಮ ಬಾಂಧವರನ್ನೇ ಮಾನಸಿಕವಾಗಿ ಪೀಡಿಸುವುದು. ಆಂತರಿಕ ಧಾರ್ಮಿಕ ಶೋಷಣೆ. ದೀನ ದಲಿತರನ್ನು ಬ್ರಾಹ್ಮಣರು - ಶಿವಾಚಾರದವರು ಜೀತ ಇರಿಸಿಕೊಳ್ಳುವುದು, ಸಾಲ ಕೊಟ್ಟು ಆಸ್ತಿ ಪಡೆಯುವುದು, ಬಡ್ಡಿಯಲ್ಲಿ ದುಡಿಸಿಕೊಳ್ಳುವುದು, ಹೆಂಗಸರನ್ನು ಜೀತಕ್ಕೆ ಇರಿಸಿಕೊಳ್ಳುವುದು ಇತ್ಯಾದಿ ಅಮಾನುಷ ಕೃತ್ಯಗಳು ಆರ್ಥಿಕ ಶೋಷಣೆಯ ಪರಿಗಳು. ಇನ್ನು ಲೈಂಗಿಕ ಶೋಷಣೆಯಂತೂ ವಿಪರೀತ. ಆಯ ತಪ್ಪಿದ ಅನೈತಿಕ ಲೈಂಗಿಕ ಘಟನೆಗಳ ಸರಣಿಯೇ ಕಾದಂಬರಿಯನ್ನು ವ್ಯಾಪಿಸಿದೆ. ಆದರೂ ಅವೆಲ್ಲ ಹಳ್ಳಿಯ ಬದುಕಿನ ವಾಸ್ತವಿಕತೆಗಳಾಗಿ ಬಂದಿವೆಯೆಂಬುದನ್ನು ಮರೆಯುವಂತಿಲ್ಲ. ಗಂಗವ್ವನನ್ನು ನಂಜೇಗೌಡ, ಚಂದ್ರಿಯನ್ನು ಶಿವಪಾದಪ್ಪ, ಚೆಲುವಿಯನ್ನು ಉದ್ಧೂರಯ್ಯ, ಶಿವುಸಿಯನ್ನು ಕೇಶವಯ್ಯ, ಕೂಲಿ ಹೆಂಗಸರನ್ನು ಕೆಂಗಣ್ಣಪ್ಪ, ಗಂಗಿ ಮತ್ತು ರುಕ್ಮಿಣಿಯರು

ಲಕ್ಕನನ್ನು ಇದಿಷ್ಟೇ ಸಾಲದೆಂಬಂತೆ ಕೃಷ್ಣಶಾಸ್ತ್ರಿಗಳು ರುಕ್ಮಿಣಿಯನ್ನು ಲೈಂಗಿಕವಾಗಿ ಶೋಷಿಸುವುದು ಇವೆಲ್ಲಾ ಮೇಲಿನ ಮಾತಿಗೆ ಸಾಕ್ಷಿಗಳು.

ದರುಮನಹಳ್ಳಿಯ ವಿವಿಧ ಜಾತಿ, ವೃತ್ತಿ ಹಾಗೂ ಪ್ರಸಂಗಗಳನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಈ ಅರ್ಥದಲ್ಲಿ ವೈಶಾಖ ನಿಜವಾಗಿಯೂ, 'ಗ್ರಾಮಭಾರತ', ಒಕ್ಕಲಗೇರಿ, ಕುಂಬಾರಗೇರಿ, ಪರಿವಾರಗೇರಿ, ಕುರುಬಗೇರಿ, ಹೊಲಗೇರಿಗಳು ಊರಲ್ಲಿವೆ. ಬ್ರಾಹ್ಮಣ ಪರಿಸರ ಹಾಗೂ ಸಂಪ್ರದಾಯಗಳ ಖಚಿತ ವಿವರಗಳಿವೆ. ಒಟ್ಟಿನಲ್ಲಿ 'ಎದ್ದರೆ ಶಾಸ್ತ್ರ, ಮುಗಿದರೆ ಮಂತ್ರ, ಗರುಡ ಹಾರಿದರೆ, ಹಾವು ಎದುರಾದರೆ ಶಾಸ್ತ್ರ' ಇದು ಅವರ ಬದುಕಿನ ಪರಿ. ಇನ್ನೊಂದೆಡೆ ಚಾಪೆ ಹೆಣೆಯುವುದು, ಹೊಲದಲ್ಲಿ ದುಡಿಯುವುದು, ದನಕಾಯುವುದು ಇವೆಲ್ಲಾ ಹರಿಜನರ ದುಡಿಮೆಗಳು. ಕೃತಿಯಲ್ಲಿ ಶಿವಾಚಾರದವರ ಬಗ್ಗೆ ಹೆಚ್ಚಿನ ಅಂಶಗಳಿಲ್ಲ. ಎಲ್ಲೋ ಒಬ್ಬಿಬ್ಬರು ಮಠದ ಗುರುಗಳ ನೆರಳಿನಲ್ಲಿ ಸ್ವಾರ್ಥ ಸಾಧನೆ ಮಾಡುತ್ತಿರುವುದರ ಚಿತ್ರಣವಿದೆ. ನಂಜೇಗೌಡ ಈ ದೂರ್ತತನದ ಪ್ರತೀಕ.

**ಪಾತ್ರ ಚಿತ್ರಣ**

ಚದುರಂಗ ಅವರ 'ವೈಶಾಖ' ಕಾದಂಬರಿಯಲ್ಲಿ ಅನೇಕ ಪಾತ್ರಗಳು ಕಂಡುಬರುತ್ತವೆ. ಇಲ್ಲಿ ಪ್ರತಿಯೊಂದು ಪಾತ್ರವು ಕೂಡ ಮುಖ್ಯವಾಗಿದೆ. ಈ ಕಾದಂಬರಿಯು ಗ್ರಾಮೀಣ ಪ್ರದೇಶದಲ್ಲಿ ರಚನೆಯಾಗಿರುವುದರಿಂದ ಸನ್ನಿವೇಶಕ್ಕೆ ತಕ್ಕಂತೆ ಪಾತ್ರಗಳು ರಚನೆಯಾಗಿವೆ. ಚಿಕ್ಕಮಕ್ಕಳಿಂದ ಹಿಡಿದು ಮುದುಕರವರೆಗೆ ಹಲವು ವಯೋಮಾನದ ಪಾತ್ರಗಳಿವೆ. ದುಷ್ಟರಿದ್ದಾರೆ, ಆದರ್ಶವಾದಿಗಳಿದ್ದಾರೆ, ಮಹಿಳೆಯರಿದ್ದಾರೆ, ಪುರುಷರಿದ್ದಾರೆ, ಚಾಡಿಕೋರರಿದ್ದಾರೆ, ಬೇರೆ ಬೇರೆ ಧರ್ಮದ ಮತ್ತು ಜಾತಿಯ ಜನರು ಇದ್ದಾರೆ, ಸಂಪ್ರದಾಯವಾದಿಗಳಿದ್ದಾರೆ. ಇವೆಲ್ಲವು ಜೀವಂತವಾದ ಪಾತ್ರಗಳಾಗಿವೆ. ಈ ಕಾದಂಬರಿಯಲ್ಲಿ ಬಹಳಷ್ಟು ಪಾತ್ರಗಳನ್ನು ಕಾಣಬಹುದು. (ರುಕ್ಮಿಣಿ, ಲಕ್ಕ, ಕೃಷ್ಣಶಾಸ್ತ್ರಿ, ನಂಜೇಗೌಡ, ಕೇಶವಯ್ಯ, ಕಲ್ಯಾಣಿ, ಶಿವುನಿ, ಸುಶೀಲ ಸರಸಿ, ಗೋಸುಸಾಬಿ, ಚೆಲುವಿ, ಕೇಶವಯ್ಯ, ದ್ಯಾವಜಿ, ಬುಂಡಮ್ಮ, ಟಗರೂರ, ಹುಚ್ಚುಬೋರಿ, ಕುಂದುರಯ್ಯ ಹೀಗೆ ಹಲವಾರು ಪಾತ್ರಗಳನ್ನು ಕಾಣಬಹುದು). ಈ ಕಾದಂಬರಿಯಲ್ಲಿ ವಿಶೇಷವಾಗಿ ಕಾಣುವ ಪಾತ್ರಗಳೆಂದರೆ, ಲಕ್ಕ, ರುಕ್ಮಿಣಿ. ಈ ಪಾತ್ರಗಳು ಕಾದಂಬರಿಯ ಉದ್ದಕ್ಕೂ ಕಾಣಿಸಿಕೊಳ್ಳುತ್ತವೆ. ಚದುರಂಗ ಅವರು ಕಾದಂಬರಿಯಲ್ಲಿ ಇಂತಹ ಪಾತ್ರಗಳನ್ನು ಯಾವ ರೀತಿಯಾಗಿ ಚಿತ್ರಿಸಿದ್ದಾರೆ ಎಂಬುದನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

**ಲಕ್ಕ**

ವೈಶಾಖ ಕಾದಂಬರಿಯ ಪ್ರಧಾನ ಪಾತ್ರ ಲಕ್ಕ. ಇವನು ಹರಿಜನ ನಿಂಗಯ್ಯನ ಮಗ. ಶೋಷಣೆಗೆ ಒಳಗಾದ ಒಬ್ಬ ಹರಿಜನ. ಲಕ್ಕನ ಅಣ್ಣ ಗೆಜ್ಜುಗಣ್ಣ ತನ್ನ ತಮ್ಮ ವಿದ್ಯಾಭ್ಯಾಸ ಮಾಡಿ ಮುಂದೆ ಬರಬೇಕು ಎಂಬ ಮಹತ್ವಾಕಾಂಕ್ಷೆ ಉಳ್ಳವನಾಗಿದ್ದನು. ಆದರೆ ಒಂದು ದಿನ

ಮಳೆ ಬಂದಾಗ ಲಕ್ಕ ವಾಮಾಚಾರದ ಹುಡುಗಿ ಗಂಗಿಯನ್ನು ತನ್ನ ಗೊರಗಿನಲ್ಲಿಯೇ ಕರೆದುಕೊಂಡು ಶಾಲೆಗೆ ಹೋಗುತ್ತಾನೆ. ಶಾಲೆಯ ಉಪಾಧ್ಯಾಯನ ಕಣ್ಣಿಗೆ ಇದು ಬಿದ್ದು ಆತ ಲಕ್ಕನ ತಂದೆಯನ್ನು ಕರೆಸಿ, ಲಕ್ಕನನ್ನು ಶಾಲೆಗೆ ಕಳಿಸಬಾರದೆಂದು ಆಜ್ಞೆ ಮಾಡುತ್ತಾನೆ. ಲಕ್ಕನಂತಹ ಹುಡುಗರಿಂದ ವರ್ಣಸಂಕರ ಉಂಟಾಗುತ್ತದೆ ಎನ್ನುವುದೇ ಅವನ ಮುಖ್ಯ ಆರೋಪ. ಇದರಿಂದ ಮತ್ತೊಮ್ಮೆ ಲಕ್ಕ ಜೀತಕ್ಕೆ ಹೋಗಬೇಕಾಗುತ್ತದೆ. ಮುಂದೆ ಗಜ್ಜುಗಣ್ಣ ಮಾಲಿಂಗಿ ಮಡುವಿನಲ್ಲಿ ಮುಳುಗಿ ಸತ್ತು ಹೋಗುತ್ತಾನೆ. ಅವನ ಮದುವೆಗೆಂದು ಸಾಲ ಮಾಡಿದ ದುಡ್ಡಿನಲ್ಲಿ, ಬುಂಡಮ್ಮನಿಗೆ ಹಣಕೊಟ್ಟು ಲಕ್ಕನನ್ನು ಜೀತದಿಂದ ಬಿಡಿಸುವ ಕೆಲಸವೇನೋ ಆಗುತ್ತದೆ. ಆದರೆ ಸಾಲ ಹಿಂತಿರುಗಿಸುವಲ್ಲಿ ಹಣ ಕಡಿಮೆ ಬೀಳುತ್ತದೆ. ಕೃಷ್ಣಶಾಸ್ತ್ರಿಯ ತೋಟಕ್ಕೆ ಲಕ್ಕ ಕೆಲಸಕ್ಕೆ ಹೋದಾಗ ಶಾಸ್ತ್ರಿ ಲಕ್ಕನಿಗೆ ಐವತ್ತು ರೂಪಾಯಿ ಸಾಲ ಕೊಟ್ಟಿದ್ದರಿಂದ ಮದುವೆಯ ಸಾಲವೇನೋ ತೀರುತ್ತದೆ. ಆದರೆ ವರ್ಷಾನುಗಟ್ಟಲೇ ದುಡಿದರೂ ಶಾಸ್ತ್ರಿಯ ಸಾಲ ತೀರದೆ, ಲಕ್ಕ ಒಂದು ರೀತಿಯಲ್ಲಿ ಶಾಸ್ತ್ರಿಯ ಜೀತದ ಆಳೇ ಆಗಿ ದುಡಿಯಬೇಕಾಗುತ್ತದೆ. ಬ್ರಾಹ್ಮಣರಲ್ಲಿ ಈತ ದುಡಿಯುತ್ತಿದ್ದ ಕಾರಣ ಎರಡೂ ಸ್ತರಗಳ ಬದುಕಿನೊಂದಿಗೆಯೂ ಸ್ಪಂದಿಸಬಲ್ಲವನಾಗಿದ್ದನು. ಲಕ್ಕನಿಗೆ ಕೃಷ್ಣಶಾಸ್ತ್ರಿಗಳ ಸೊಸೆ ರುಕ್ಮಿಣಿಯೊಂದಿಗೆ ಹೆಚ್ಚಿನ ಸಲಿಗೆಯಿತ್ತು. ಪತಿ ಸತ್ತ ಬೇಸರದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ಬಾವಿಗೆ ಬಿದ್ದ ರುಕ್ಮಿಣಿಯನ್ನು ಲಕ್ಕ ಬದುಕಿಸುತ್ತಾನೆ. ದುಡಿಯಲು ಹೋದ ಬಡಪಾಯಿ ಲಕ್ಕ ಒಮ್ಮೆ ರುಕ್ಮಿಣಿಯ ಭೋಗಕ್ಕಾಗಿ ಬಳಸಿಕೊಳ್ಳಲ್ಪಟ್ಟ ನಿರಪರಾಧಿಯಾದರೂ ಊರ ಜನರ ಮುಂದೆ ಪಂಚಾಯತಿಯಲ್ಲಿ ನಿಲ್ಲಬೇಕಾಗಿ ಬಂತು. ರುಕ್ಮಿಣಿಯನ್ನು ತಾನೇ ಒತ್ತಾಯಪೂರ್ವಕವಾಗಿ ಬಳಸಿಕೊಂಡುದಾಗಿ ತಿಳಿಸಿ ತನ್ನ ತಪ್ಪನ್ನು ತಾನೇ ಹೊರಲು ಸಿದ್ಧನಾಗುತ್ತಾನೆ. ಮೊದಲಿನಿಂದಲೂ ತನ್ನ ಗಾಂಭೀರ್ಯ, ಮಾತಿನ ತೂಕ, ವಿನಯ, ಮುಂತಾದ ಗುಣಗಳಿಂದ ಊರ ಜನರ ಪ್ರೀತಿಗೆ ಪಾತ್ರನಾದ ಲಕ್ಕ ಈ ಘಟನೆಯ ಮೂಲಕ ಬ್ರಾಹ್ಮಣ ಕುಲಕ್ಕೇ ಅಪಮಾನ ಮಾಡಿದ ಎಂಬ ಕಟುವಿಮರ್ಶೆಗೆ ಗುರಿಯಾಗುತ್ತಾನೆ. ಲಕ್ಕ ವೈಶಾಖಿ ಕಾದಂಬರಿಯ ಕೇಂದ್ರಬಿಂದು. ಲಕ್ಕ ಪಂಚಾಯಿತಿಯ ಮುಂದೆ ನಿಂತ ದಿನ ಇಡೀ ಊರಿಗೆ ಊರೇ ತೆರೆದ ಕಣ್ಣು ಕಿವಿಗಳಿಂದ ಅತ್ತ ಲಕ್ಷ್ಯಕೊಟ್ಟಿತು. ಕೊನೆಗೂ ಲಕ್ಕ ಶಿಕ್ಷೆಗೆ ಗುರಿಯಾದ, ಹೊಡೆತ ತಿಂದ. ದರುಮನ ಹಳ್ಳಿಯ ಜನರು ಪಂಚಾಯತಿ ನ್ಯಾಯ ತೀರ್ಮಾನದ ಪ್ರಕಾರ ಲಕ್ಕನನ್ನು ಗಡಿಪಾರು ಮಾಡಿದಾಗ ಗೋಸುಸಾಬಿ ತಮ್ಮ ಸೀಮೆಯಲ್ಲಿ ಆತನಿಗೆ ಆಶ್ರಯ ನೀಡಿದ. ತಾಯಿಯನ್ನು ಕಳೆದುಕೊಂಡನಲ್ಲದೆ ತಂಗಿಯ ದುರ್ದೆಸೆ ಕಂಡ. ಊರಿನ ಎಲ್ಲ ಬಗೆಯ ಶೋಷಣೆಗಳನ್ನು ಅನುಭವಿಸಿದ. ಲಕ್ಕ ಕೊನೆಯ ಹಂತದಲ್ಲಿ ಮಾನಸಿಕ ಸ್ಥಿರತೆಯನ್ನು ಪಡೆದು ಹೊಸದೊಂದು ಮುಕ್ತ ಬದುಕಿನ ಕ್ಷಿತಿಜ ಪ್ರವೇಶಿಸಿದ ಎಂಬ ಸೂಚನೆಯೊಂದಿಗೆ ಲಕ್ಕನ ಪಾತ್ರ ತನ್ನ ಗುರಿ ತಲುಪುತ್ತದೆ.

ರುಕ್ಮಿಣಿ

ಕಾದಂಬರಿಯ ಕೇಂದ್ರ ಪಾತ್ರಗಳಲ್ಲೊಂದಾಗಿ ಬರುವ ರುಕ್ಮಿಣಿ ಒಬ್ಬ ಬ್ರಾಹ್ಮಣ ವಿಧವೆ. ಕೃಷ್ಣಶಾಸ್ತ್ರಿಗಳ ಸೊಸೆ. ಯೌವನ ತುಂಬಿತುಳುಕುತ್ತಿರುವಾಗಲೇ ಗಂಡನನ್ನು ಕಳೆದುಕೊಂಡಿದ್ದಾಳೆ. ಮಕ್ಕಳನ್ನೂ ಕಾಣದ ಅನಾಥೆ. ಆದರೆ ಆಸರೆಗಾಗಿ ಕೃಷ್ಣಶಾಸ್ತ್ರಿಯಂತಹ ಮಾವನಿದ್ದಾನೆ. ಮನೆಯೊಳಗಿನ ದುಡಿಮೆ ಮಾಡುತ್ತಾ ತಾಯ್ತಂದೆ ಅಣ್ಣ-ಅತ್ತಿಗೆ, ಗಂಡ ನಂತರ ಮಾವನ ರಕ್ಷಣೆಯಲ್ಲಿ ಅವಳು ಬೆಳೆದು ಬಾಳಿದಳು. ಗಂಡ ತೀರಿಕಂಡರೂ ಸಕೇಶಿಯಾಗುವಳಿಯುವ ಇವಳು ಸ್ವಲ್ಪ ಕಾಲ ಅಣ್ಣನ ಮನೆಗೆ ಹೋಗಿ ಇರುತ್ತಾಳೆ. ಆದರೆ ಅಲ್ಲಿಯೇ ನೆಲೆ ನಿಲ್ಲಲಾಗುವುದಿಲ್ಲ. ಪತಿಯನ್ನು ಕಳೆದುಕೊಂಡ ನಂತರದ ಅವಳ ಮಾನಸಿಕ ಸ್ಥಿತಿಯು ಅಲ್ಲಕಲ್ಲೋಲವಾಗಿ ಸಾವಿನ ಯೋಚನೆಯನ್ನೂ ಮಾಡುತ್ತಾಳೆ. ಈ ರೀತಿಯಾಗಿ ಬದುಕಿನ ಮೊದಲ ಹಂತದ ಮುಖ್ಯ ಅಮುಖ್ಯ ವಿಷಯಗಳ ವಿವರಗಳನ್ನೊಳಗೊಂಡ ರುಕ್ಮಿಣಿಯ ವಿಶಿಷ್ಟ ವ್ಯಕ್ತಿತ್ವದ ಬಗೆಗಿನ ಅರ್ಥಪೂರ್ಣ ಚಿತ್ರಣವನ್ನು ಕಾದಂಬರಿಯಲ್ಲಿ ಕಾಣಬಹುದು. ಗಂಡನಿಲ್ಲದ ಒಂಟಿ ರುಕ್ಮಿಣಿಯು ಆತ್ಮಹತ್ಯೆಯ ಪ್ರಯತ್ನವನ್ನೂ ಮಾಡಿ ಲಕ್ಕನಿಂದ ಬದುಕಿಳಿಯುತ್ತಾಳೆ. "ಸತ್ತು ಸಾಯುವ ಘೋರ ದುರಂತಕ್ಕಿಂತ ಇದ್ದು ಸಾಯುವ ಇನ್ನೂ ಘೋರ ದುರಂತದ ಅವಶ್ಯಕಪಾತ್ರವಾಗಿ ಉಳಿಯುತ್ತಾಳೆ."[೧] ಆನಂತರದ ರುಕ್ಮಿಣಿಯ ಜೀವನವು ಯಾವ ಏರುಪೇರುಗಳಿಲ್ಲದೆ ಸಹಜವಾಗಿಯೇ ಸಾಗಿತ್ತು. ಇಂತಹ ರುಕ್ಮಿಣಿಯ ಜೀವನದ ಪ್ರಶಾಂತ ಸರೋವರದಲ್ಲಿ ಭೀಕರ ಅಲೆಗಳು ಉಂಟಾಗತೊಡಗಿದವು. ಎಲ್ಲಿಯೂ ತನ್ನನ್ನು ತಾನು ಹೊರ ಸಮಾಜದ ಎದುರು ನಿಂತು ರಕ್ಷಿಸಿಕೊಳ್ಳಬೇಕಾದ ಅಗತ್ಯ ಅವಳ ಜೀವನದಲ್ಲಿ ಕೊನೆಯ ದುರಂತವರೆಗೂ ಬಂದಿರಲಿಲ್ಲ. ಆದರೆ ಅಂತಹ ಸಂದರ್ಭ ಅವಳ ಪಾಲಿಗೆ ಕಾದಂಬರಿಯ ಕೊನೆಯಲ್ಲಿ ಬರುತ್ತದೆ. ಅವಳ ಪಾಲಿಗೆ ದರಮನಹಳ್ಳಿ 'ಕತ್ತಲೆಯ ಕಾಡು' ಕೇಶವಯ್ಯ, ಲಕ್ಷ್ಮಮ್ಮ ವೆಂಕಟೇಶ ಜೋಯಿಸರು, ನಂಜೇಗೌಡ ಇವರೆಲ್ಲ ಒಂದಿಲ್ಲ ಒಂದು ರೀತಿ ಅವಳನ್ನು ಹರಿದು ತಿನ್ನಲು ಹವಣಿಸುವ ಹದ್ದುಗಳು. ಧಾರ್ಮಿಕ ಸಂಕೋಲೆಯಲ್ಲಿ ಬಂಧಿತಳಾದ ಇವಳು ಅಸಹಾಯಕತೆಯ ಸಂಕೇತ. ರುಕ್ಮಿಣಿಯನ್ನು ತನ್ನ ಸ್ವಂತ ಮಗಳ ಹಾಗೆ ನೋಡಿಕೊಳ್ಳುತ್ತಿದ್ದ ಕೃಷ್ಣಶಾಸ್ತ್ರಿ ಒಂದು ರಾತ್ರಿ ರುಕ್ಮಿಣಿಯ ಮೇಲೆ ಅತ್ಯಾಚಾರ ಮಾಡುತ್ತಾನೆ. ಈ ಅತ್ಯಾಚಾರದಿಂದ ಪ್ರೇರಣೆಗೊಂಡು ಲಕ್ಕನ ಮೇಲೆ ತಾನು ಅತ್ಯಾಚಾರವೆಸಗುತ್ತಾಳೆ. ರುಕ್ಮಿಣಿ ಹಾಗೆ ಒಂದೇ ತಿಂಗಳಿನ ಅವಧಿಯಲ್ಲಿ ಮಾವ ಕೃಷ್ಣಶಾಸ್ತ್ರಿ ಮತ್ತು ಆಳು ಲಕ್ಕ ಇವರೊಂದಿಗೆ ಲೈಂಗಿಕ ಸಂಬಂಧ ಹೊಂದಿದ್ದಕ್ಕಾಗಿ ಗರ್ಭಧರಿಸುತ್ತಾಳೆ. ಈ ವಿಷಯ ಊರಲ್ಲೆಲ್ಲಾ ಪುಕಾರಾಗಿ ಪಂಚಾಯತಿ ಕಟ್ಟೆಗೆ ಬರುತ್ತದೆ. ಪಂಚಾಯತಿ ಹಿರಿಯರು ಲಕ್ಕನನ್ನು ಅಪರಾಧಿಯನ್ನಾಗಿ ಮಾಡಿ, ಹೊಡೆದು ಬಡಿದು ಹಿಂಸೆಕೊಟ್ಟು, ಊರಿನಿಂದ ಹೊರಹಾಕುತ್ತಾರೆ. ಇತ್ತ ರುಕ್ಮಿಣಿಯನ್ನು ಬ್ರಾಹ್ಮಣಕೇರಿಯ ಜನ ಅವಳನ್ನು ಶಪಿಸಿ ಘಟಸ್ಫೋಟ ಕರ್ಮಮಾಡಿ, ತಲೆಬೋಳಿಸಿ ಕತ್ತೆಯ

ಮೇಲೆ ಕೂರಿಸಿ ಮೆರವಣಿಗೆ ಮಾಡಿ ಊರಿಂದಾಚೆ ಓಡಿಸಬೇಕೆಂದು ಯೋಚಿಸುತ್ತಿರುವಾಗ ಸ್ವಾಭಿಮಾನಿಯಾದ ರುಕ್ಮಿಣಿ ಮನೆಯನ್ನೇ ತೊರೆದು ಹೊರಟುಹೋಗುತ್ತಾಳೆ. ರುಕ್ಮಿಣಿಯು ದೈಹಿಕ, ಮಾನಸಿಕ ಎರಡೂ ಬಗೆಯ ನೋವುಗಳನ್ನು ಅನುಭವಿಸುತ್ತಾಳೆ. ಕಾದಂಬರಿಯ ಕೊನೆಯಲ್ಲಿ ಗರ್ಭಿಣಿಯಾದ ಈ ಹೆಂಗಸು ಎಲ್ಲಿ ಹೋದಳೆಂಬುದು ಗೊತ್ತಾಗುವುದಿಲ್ಲ. ಜನರು ಮಾತ್ರ ಅವಳು ಆ ಕೋಟೆಯೊಳಗೆ ಹೋದಳೆಂಬ ಮಾತನ್ನು ಹೇಳುತ್ತಾ ಅಲ್ಲಿಂದ ಹೆಂಗಸೊಬ್ಬಳ ದನಿಯನ್ನು ಕೇಳುವರು. ಊರಿಗೆ ಬಂದ ಪ್ಲೇಗಿಗೂ ಆಕೆಗಾದ ಅನ್ಯಾಯಕ್ಕೂ ಸಂಬಂಧ ಕಲ್ಪಿಸುವರು. ಆಕೆಯನ್ನು ಪ್ರೇತವೆಂಬಂತೆ ಕೇಶವಯ್ಯ ಒಮ್ಮೆ ಕನಸು ಕಾಣುತ್ತಾನೆ. "ಲಕ್ಕನ ನಾಳೆಗಳಿಗೆ ಇರುವ ಸಾಧ್ಯತೆಗಳು ರುಕ್ಮಿಣಿಯ ನಾಳೆಗಳಿಗೆ ಇಲ್ಲವೆಂಬುದು ಕಾದಂಬರಿಯ ನಿಲುವು ಎನ್ನಬಹುದು".[೨] ಈ ಪಾತ್ರದ ವಿನ್ಯಾಸದೊಂದಿಗೆ ಲೇಖಕರು ಊರಿನ ಸಂಸ್ಕೃತಿಯ ಪತನವನ್ನು ಸೂಚಿಸಿದಂತಿದೆ.

**ಕೃಷ್ಣಶಾಸ್ತ್ರಿ**

ಕೃಷ್ಣಶಾಸ್ತ್ರಿಗಳು ಮೂಲತಃ ಕೃಷಿಕರು ಮತ್ತು ಸಣ್ಣ ಪ್ರಮಾಣದ ಕೃಷಿ ಉತ್ಪನ್ನಗಳ ಮಾರಾಟಗಾರರೂ ಆಗಿದ್ದರು. ಅವರ ಮಗ ವಿಶ್ವ ರುಕ್ಮಿಣಿಯ ಪತಿ. ಲಗ್ನವಾದ ಕೆಲವೇ ದಿನಗಳಲ್ಲಿ ತೀರಿ ಹೋದನು. ವಿಧವೆ ರುಕ್ಮಿಣಿಗೆ ಕೇಶಮುಂಡನ ಮಾಡಿಸಿ ವಿಧವಾ ಸಂಸ್ಕಾರ ಮಾಡಿಸಲು ಬ್ರಾಹ್ಮಣ ಸಮಾಜ ಹವಣಿಸಿದಾಗ ಕೃಷ್ಣಶಾಸ್ತ್ರಿಗಳು ಅದನ್ನು ಪ್ರತಿಭಟಿಸುತ್ತಾರೆ. ರುಕ್ಮಿಣಿ ಹೇಗೋ ಬದುಕುತ್ತಾಳೆ. ಕೃಷ್ಣಶಾಸ್ತ್ರಿಗಳು ಸಹ ಸತಿಯನ್ನು ಕಳೆದುಕೊಂಡು ದೈಹಿಕ ಸಂಯಮದ ಪರೀಕ್ಷೆಗೆ ಗುರಿಯಾಗಿ ಮಧ್ಯದಲ್ಲಿ ಸೋಲುತ್ತಾನೆ. ಒಂದು ದಿನ ಮಾವ ಕೃಷ್ಣಶಾಸ್ತ್ರಿಗಳು ಸೊಸೆ ರುಕ್ಮಿಣಿಯನ್ನು ಬೋಗಿಸಿಬಿಡುತ್ತಾರೆ. ಪ್ರತಿಭಟಿಸುವ ಪರಿಸ್ಥಿಯಾಗಲಿ ಧೈರ್ಯವಾಗಲಿ ರುಕ್ಮಿಣಿಯಲ್ಲಿ ಉಳಿದಿರಲಿಲ್ಲ. ಸೊಸೆ ರುಕ್ಮಿಣಿಯ ಬದುಕನ್ನು ದುರಂತಗೊಳಿಸುತ್ತಾನೆ. ತಮ್ಮ ತಪ್ಪಿನ ಅರಿವಾದ ತಕ್ಷಣ ಕೃಷ್ಣಶಾಸ್ತ್ರಿಗಳ ಬದುಕು ವಿರಕ್ತಿಯಮಾರ್ಗ ಹಿಡಿಯುತ್ತದೆ. ಬದುಕಿನಲ್ಲಿ ಹತಾಶರಾದ ಕೃಷ್ಣಶಾಸ್ತ್ರಿಗಳು ಕಾಶಿಗೆ ಹೋಗಬಯಸಿದರಾದರೂ ತಂಗಿಯ ಮಗಳು ಪುಟ್ಟ ಸರಸಿಯ ಬಗ್ಗೆ ಯೋಚಿಸಿ ಮನ ಬದಲಾಯಿಸಿದರು.

**ನಂಜೇಗೌಡ**

ವೈಶಾಖ ಕಾದಂಬರಿಯಲ್ಲಿ ಒಡೆದು ಕಾಣುವ ಪಾತ್ರ. ಹೆಸರಿಗೆ ತಕ್ಕಂತೆ ಧೂರ್ತ, ಕಾಮುಕ, ಸಮಯ ಸಾಧಕ, ಸಮಾಜಘಾತಕ ವ್ಯಕ್ತಿಯಾಗಿದ್ದ. ಈತನು ತನ್ನ ಇಂತಹ ವ್ಯವಹಾರಗಳನ್ನು ಮುಚ್ಚಿಕೊಳ್ಳಲು ಮಠದ ಸ್ವಾಮಿಗಳೊಂದಿಗಿನ ಆಪ್ತತೆಯನ್ನು ಬಳಸಿಕೊಂಡಿದ್ದ. ಅನಾಚಾರ, ಅಧರ್ಮ ಮತ್ತು ಕ್ರೌರ್ಯಗಳಿಗೆ ಹೇಗೆ ಧಾರ್ಮಿಕ ಮುಸುಕು ತೊಡಿಸಬಹುದು ಎನ್ನುವುದನ್ನು ನಂಜೇಗೌಡನ ಪಾತ್ರವು ತೋರಿಸಿಕೊಡುತ್ತದೆ. ಹೆಸರಿಗೆ ತಕ್ಕಂತೆ ಇವನು ನಂಜಿನ ಸ್ವಭಾವದವನು.

ಊರ ಹಿರಿಯ. ಮಹಾಕಿತಾಪತಿ ಮನುಷ್ಯ. ತನಗೆ ವಿರೋಧವಾದರೆ ಊರಿಗೆ ಊರನ್ನೇ ಹೊತ್ತಿಸಿ ಬೇಯಿಸುವಂಥವನು. ಊರಿನಲ್ಲಿ ಯಾರು ಸುಖವಾಗಿರಬಾರದು ಹಾಗೂ ತನ್ನನ್ನು ಮೀರಿ ಯಾರೂ ಬೆಳೆಯಬಾರದು ಎಂಬುದು ಇವನ ಸ್ವಭಾವವಾಗಿತ್ತು. ಗುಡ್ಡದ ಕಟ್ಟಿಗೆ ಕಡಿದು ಕಳ್ಳ ಸಾಗಾಣಿಕೆ ಮಾಡುವುದು ಇವನ ಮುಖ್ಯ ಕೆಲಸಗಳಲ್ಲೊಂದಾಗಿತ್ತು.

ಇವರಲ್ಲದೆ ಲಕ್ಕನ ತಾಯಿ ಕಲ್ಯಾಣಿ ಸಂಸಾರದ ಕೇಂದ್ರವಾಗಿರುವವಳು. ನೆಲೆ ತಪ್ಪಿದ ಅವನ ತಂಗಿ ಸಿವುನಿ ತನ್ನ ಮಗುವಿನೊಡನೆ ದರುಮನಹಳ್ಳಿಯನ್ನು ಸೇರಿದ್ದಾಳೆ. ಇಷ್ಟು ವಿವರಗಳ ಜೊತೆಗೆ ದರುಮನಹಳ್ಳಿಯ ಇನ್ನು ಹಲವು ಪಾತ್ರಗಳು ಹೆಣೆದುಕೊಳ್ಳುತ್ತವೆ. ಸಂಸಾರಗಳ ಗುಟ್ಟು ಬಯಲು ಮಾಡುವ ಕುಹಕ ಸಮಾಧಾನಿ ಲಕ್ಷ್ಮಮ್ಮ, ರುಕ್ಮಿಣಿಯ ಬಗ್ಗೆ ವಿಚಿತ್ರ ಅಸಮಾಧಾನದ ಕೇಶವಯ್ಯ, ಕೃಷ್ಣಶಾಸ್ತ್ರಿಗಳ ತಂಗಿ ವಿಧವೆ ಸುಶೀಲ ಹಾಗೂ ಅವಳ ಮಗಳು ಸರಸಿ, ರುಕ್ಮಿಣಿಯ ಅಣ್ಣ ಅಶ್ವತ್ಥ. ಅವನ ಹೆಂಡತಿ ಸಾವಿತ್ರಿ ಮಕ್ಕಳು, ಜಾನಕಿ, ಶೇಷ, ರುಕ್ಮಿಣಿಯ ಬಗ್ಗೆ ಒಲವು ಹೊಂದಿದ್ದ ಶ್ಯಾಮ ಅವಳ ಅಕ್ಕ ಪಾರ್ವತಿ, ಭಾವ ಚಂದ್ರಶೇಖರಯ್ಯ ಇವರೆಲ್ಲ ಒಂದು ಸ್ತರದ ಪಾತ್ರಗಳಾದರೆ, ಸೊಸೆ ಕುಲಾಯಿ ಸಾಬಿಯೊಡನೆ ಓಡಿ ಹೋದದ್ದನ್ನು ತಡೆದುಕೊಂಡು ಒಬ್ಬಂಟಿಗಳಾಗಿ ಬದುಕು ನೀಗುವ ಬುಂಡಮ್ಮ, ಗೋಸುಸಾಬಿ, ಕುಂದರಯ್ಯ, ಟಗರೂರ, ದ್ಯಾವಜಿ, ಹುಚ್ಚುಬೋರಿ, ಚೆಲುವಿ ಇವರೆಲ್ಲ ಇನ್ನೊಂದು ಸ್ತರದ ಪಾತ್ರಗಳು.

ಇದಲ್ಲದೆ ದರುಮನ ಹಳ್ಳಿಗೆ ಒಂದು ಶಿವಾಚಾರದ ಮಠವಿದೆ, ಅದರ ನೈತಿಕ ಕೇಂದ್ರ ಖಿಲಗೊಂಡಿದೆ. ಭ್ರಷ್ಟತೆ ಅಲ್ಲಿ ಬೇರೂರಿದೆ. ಕುಡಿತ, ಹಾದರಗಳು ಅಲ್ಲಿ ನಿತ್ಯದ ವ್ಯವಹಾರಗಳಿವೆ, ಜೀತದಾಳುಗಳೊಡನೆ ಸಲಿಂಗ ಕಾಮಿಯಾಗುವ ಕೆಂಗಣ್ಣಪ್ಪ ತನ್ನ ಗಂಡಸುತನದ ಗಳಿಕೆಗೆ ಪುರುಷರತ್ನದ ಸೊಪ್ಪನ್ನು ಹುಡುಕಾಡುವನು. ಬೆಟ್ಟಯ್ಯ ಆಸ್ತಿಗಾಗಿ ಸತ್ತ ಚಿಕ್ಕೇರಿಯ ಬೆರಳಿನ ಗುರುತನ್ನು ಪತ್ರಕ್ಕೆ ಒತ್ತಿಸಿಕೊಳ್ಳುವವನು. ಗಂಗಿಯ ಮೇಲೆ ಕಣ್ಣಿಟ್ಟ ನಂಜೇಗೌಡ ಆಕೆಯನ್ನು ಮುಟ್ಟಾಗಿರುವಾಗ ಪಂಚಾಯತಿಗೆ ಎಳದು ಅವಳನ್ನು ಲೈಂಗಿಕವಾಗಿ ಬಳಸಿಕೊಳ್ಳಲು ನೋಡುತ್ತಾನೆ.

ಹೀಗೆ ಇವರೆಲ್ಲರಿಗೂ ಭಿನ್ನವಾಗಿ ಮಾರಿ ಗುಡಿಯ ಅಣ್ಣಂದಿರು ಇದ್ದಾರೆ. ಸದಾ ಜೂಜಾಡುತ್ತಿರುವ ಇವರು ಒಮ್ಮೆ ರುಕ್ಮಿಣಿಯನ್ನು ಕೆಣಕಿದರೆ ಮತ್ತೊಮ್ಮೆ ನಂಜೇಗೌಡನ ಹೆಂಡತಿಯ ಹೆಣವನ್ನು ಗುದ್ದಿನಿಂದ ತೆಗೆದು ಮೈಮೇಲಿನ ಚಿನ್ನವನ್ನು ಕದಿಯುತ್ತಾರೆ. ಈ ಪಾತ್ರಗಳೆಲ್ಲವೂ ವೈಶಾಖ ಕಾದಂಬರಿಯ ಪಾತ್ರವೈವಿಧ್ಯತೆಯನ್ನು ವಿಶದೀಕರಿಸುತ್ತವೆ.

**ಭಾಷೆ**

ಒಂದು ಜನಾಂಗದ ಸಂಸ್ಕೃತಿಯನ್ನು ತಿಳಿಯಬೇಕಾದರೆ ಭಾಷೆ ಅತ್ಯಂತ ಮಹತ್ವಪೂರ್ಣವಾದುದು. ಅದೇ ರೀತಿ ಒಂದು ಸಾಹಿತ್ಯ ಕೃತಿಯ ಮಹತ್ವವನ್ನು ತಿಳಿಯಬೇಕಾದರೆ

ಭಾಷೆ ಪ್ರಮುಖ ಪಾತ್ರವಹಿಸುತ್ತದೆ. ಒಂದು ಸಾಹಿತ್ಯ ಕೃತಿಗೆ ತನ್ನ ಪ್ರಾದೇಶಿಕ ಭಾಷೆಯ ಬಳಕೆಯಿಂದಲೂ ಮಹತ್ವಪಡೆದುಕೊಂಡಿರುತ್ತದೆ. ಕನ್ನಡದಲ್ಲಿ ಮಹತ್ತರ ಕಾದಂಬರಿಗಳಾದ ರಾವ್ ಬಹದ್ದೂರ ಅವರ ಗ್ರಾಮಾಯಣ, ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕುವೆಂಪು ಅವರ ಕಾನೂರು ಹೆಗ್ಗಡತಿ ಹಾಗೂ ಮಲೆಗಳಲ್ಲಿ ಮದುಮಗಳು ಇವೆಲ್ಲವೂ ತಮ್ಮ ಪ್ರದೇಶದ ಜನರ ಆಡುಮಾತನ್ನು ಅರ್ಥಪೂರ್ಣವಾಗಿ ಬಳಸುವ ಕಾರಣದಿಂದಲೂ ಪ್ರಸಿದ್ಧವಾಗಿವೆ.

ಚದುರಂಗರ ವೈಶಾಖ ಕಾದಂಬರಿಯು ಹಲವಾರು ಸನ್ನಿವೇಶಗಳಿಂದ ಕೂಡಿದೆ. ಶಿಷ್ಟ ಮತ್ತು ಜನಪದ ಕತೆಯ ಸೊಗಡಿನಿಂದ ಕೂಡಿದೆ. ಸಹಜವಾಗಿ ಅವರು ಮೈಸೂರು ಪ್ರದೇಶದ ಆಡುನುಡಿಯನ್ನು ಬರವಣಿಗೆಯಲ್ಲಿ ತಂದಿರುತ್ತಾರೆ. ಈ ಬಗೆಯ ಆಡುನುಡಿಯ ಬಳಕೆಯಿಂದ ಕಥೆಯ ಸಂವಹನಕ್ಕೆ ಯಾವ ತೊಂದರೆಯೂ ಆಗದಿರುವುದನ್ನು ವಿಶೇಷವೆಂತಲೇ ಹೇಳಬಹುದು. ಬಹುಶಃ ಮೈಸೂರು ಭಾಗದ ಕನ್ನಡ ಭಾಷೆಯು ಪ್ರಮಾಣೀಕೃತ ಅಂದರೆ ಸ್ಟ್ಯಾಂಡರ್ಡ್ ಕನ್ನಡ ಎಂದು ಈಗಾಗಲೇ ಚಾಲ್ತಿಯಲ್ಲಿರುವುದರಿಂದ ಇದು ಸಾಧ್ಯವಾಗಿರಬಹುದು. ಚದರುಂಗರಿಗೇ ವಿಶಿಷ್ಟವಾದ ಶೈಲಿ, ಅವರ ಶಿಷ್ಟ ಮತ್ತು ಆಡುನುಡಿಗಳ ಭಾಷಿಕ ಪ್ರಯೋಗಗಳಿಂದ ಒಡಮೂಡಿದ ಕಾವ್ಯಾತ್ಮಕ ಶೈಲಿಯು ಓದುಗರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ. ಶಿಷ್ಠ ಮತ್ತು ಕೆಳವರ್ಗದ ಜನರ ಜೀವನದ ನಡೆ ನುಡಿ ಆಚಾರ-ವಿಚಾರ ಸಂಸ್ಕೃತಿ ಸಂಪ್ರದಾಯ, ಅವರು ಬಳಸುವ ಆಡುನುಡಿ ಇವೆಲ್ಲವುಗಳನ್ನು ಸಮರ್ಪಕವಾಗಿ ದುಡಿಸಿಕೊಳ್ಳಲಾಗಿದೆ.

ರುಕ್ಮಿಣಿ ಹಾಗೂ ಕೃಷ್ಣಶಾಸ್ತ್ರಿಗಳ ಪ್ರಜ್ಞೆಯ ಮೂಲಕ ದಾಖಲಾಗುವ ವಿವರಗಳನ್ನು ಕಥನಕ್ರಮದ ನೆಲೆಯಲ್ಲಿ ಶಿಷ್ಟಭಾಷೆಯಲ್ಲಿ ಚಿತ್ರಿಸಿರುತ್ತಾರೆ. ಕೇಂದ್ರಪಾತ್ರವಾದ ಲಕ್ಕನ ಪ್ರಜ್ಞೆಯ ಮುಖಾತರ ದಾಖಲಾಗುವ ವಿವರಗಳಿಗೆಲ್ಲ ಆಡುನುಡಿಯ ಜನಪದದ ಸತ್ವವನ್ನು ಧಾರೆ ಎರೆದಿರುತ್ತಾರೆ. ಅಲ್ಲಿ ಬಳಕೆಯಾಗಿರುವ, ಗಾದೆಗಳು, ಒಗಟುಗಳು, ನುಡಿಗಟ್ಟುಗಳು, ಗ್ರಾಮೀಣ ಪ್ರದೇಶದ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿ ಗ್ರಾಮೀಣ ಜಗತ್ತಿನ ಜೀವಂತಿಕೆಯನ್ನು ಪ್ರತಿಸೃಷ್ಟಿಸುವಲ್ಲಿ ಸಹಾಯಕವಾಗಿವೆ.

ಬ್ರಾಹ್ಮಣ ಮತ್ತು ಶೂದ್ರರ ಪ್ರಜ್ಞೆಯನ್ನೇ ಕೇಂದ್ರವಾಗಿ ಉಳ್ಳ ಈ ಕಾದಂಬರಿಯು ಭಾಷಾ ಪ್ರಯೋಗದಲ್ಲೂ ಕೂಡ ಬಹು ವಿಶಿಷ್ಟವಾದ ಯಶಸ್ವಿ ಕೃತಿ ಎನಿಸಿದೆ.

## ಅಡಿ ಟಿಪ್ಪಣಿಗಳು

೧. ಶಾಂತಿನಾಥ ದಿಬ್ಬದ, ಗ್ರಾಮೀಣ ಬದುಕಿನ ಸಮರ್ಥ ಚಿತ್ರಣ ವೈಶಾಖ, ***ವೈಶಾಖದ ವೈವಿಧ್ಯತೆ,*** ಸಂ. ಬಸವರಾಜ ಸಬಹದ, ಪು. ೧೯೩

೨. ಕೆ. ವಿ. ನಾರಾಯಣ, ***ವೈಶಾಖ,*** **ಬೇರು ಕಾಂಡ ಚಿಗುರು,** ಪು. ೨೫

# ಅಧ್ಯಾಯ ನಾಲ್ಕು

# ಕೆಳ ಮತ್ತು ಮೇಲ್ವರ್ಗಗಳ ಲೈಂಗಿಕ ಪರಿಕಲ್ಪನೆಗಳು

ಚದುರಂಗ ಅವರ ವೈಶಾಖ ಕಾದಂಬರಿ ಗ್ರಾಮೀಣ ಸಂವೇದನೆಗಳಿಗೆ ಹಿಡಿದ ಕನ್ನಡಿಯಾಗಿದೆ. ಪ್ರಗತಿಶೀಲ ಕಾದಂಬರಿಕಾರರಾಗಿ ತಮ್ಮನ್ನು ಗುರುತಿಸಿಕೊಂಡು ಬೆಳೆದ ಚದುರಂಗರು ಇದುವರೆಗೂ ನಾಲ್ಕು ಕಾದಂಬರಿಗಳನ್ನು ರಚಿಸಿದ್ದಾರೆ. 'ಸರ್ವಮಂಗಳ'ದಂತಹ ತಮ್ಮ ಪ್ರಥಮ ಕಾದಂಬರಿಯ ಮೂಲಕವೇ ಮಹತ್ವದ ಲೇಖಕರಾಗಿ ಪರಿಗಣಿಸಲ್ಪಟ್ಟ ಚದುರಂಗರು, ಉಯ್ಯಾಲೆ ಕಾದಂಬರಿಯಲ್ಲಿ ಪ್ರಗತಿಶೀಲ ಚಳವಳಿಯಲ್ಲಿ ಪ್ರಗತಿಪರ ಹೆಜ್ಜೆಗಳನ್ನು ಮೂಡಿಸಿದ್ದಾರೆ. ೧೯೮೧ರಲ್ಲಿ ಪ್ರಕಟವಾದ ಇವರ ವೈಶಾಖ ಪ್ರಗತಿಶೀಲ-ನವ್ಯ-ಬಂಡಾಯ ಚಳವಳಿಗಳ ಎಲ್ಲಾ ಸಮರ್ಥನೆಲೆಗಳನ್ನು ಮೈಗೂಡಿಸಿಕೊಂಡು ಹುಟ್ಟಿದ ಕಾದಂಬರಿಯಾಗಿದೆ. ಗ್ರಾಮೀಣ ಸಂವೇದನೆಗಳ ಹಿನ್ನೆಲೆಯಲ್ಲಿ ಇದೊಂದು ಮಹತ್ವದ ಕಾದಂಬರಿ. ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯ ನಂತರ ಮೈಸೂರು ಪ್ರದೇಶದ ಗ್ರಾಮೀಣ ಬದುಕನ್ನು ವಾಸ್ತವವಾದಿ ನೆಲೆಯಲ್ಲಿ ಹಿಡಿದಿಟ್ಟ ಕಾದಂಬರಿ ಎಂದರೆ ವೈಶಾಖ. ಕನ್ನಡದ ಕೆಲವೇ ಮಹತ್ವದ ಕಾದಂಬರಿಗಳ ಸಾಲಿಗೆ ವೈಶಾಖವೂ ಸೇರಿದೆ.

ವೈಶಾಖವನ್ನು ಓದುತ್ತಿದ್ದಂತೆ ಜನಪದರ ಬದುಕಿನ ದಟ್ಟ ಚಿತ್ರಣ ಕಣ್ಮುಂದೆ ಬಂದು ನಿಲ್ಲುತ್ತದೆ. ಹಳ್ಳಿಗಾಡಿನ ಬುದುಕು ಪರೆ-ಪರೆಯಾಗಿ ಬಿಚ್ಚಿಕೊಂಡು ಅದ್ಭುತವಾದ ಅನುಭವದ ಲೋಕವನ್ನು ತೆರೆದಿಡುತ್ತದೆ. ತಮ್ಮ ಕಥೆ ಕಾದಂಬರಿಗಳಲ್ಲಿ ಗ್ರಾಮೀಣ ಸಂವೇದನೆಗಳನ್ನು ಕುರಿತು ಈಗಾಗಲೇ ಅನೇಕ ಲೇಖಕರು ಬರೆದಿದ್ದಾರೆ. ಆದರೆ ಪ್ರಗತಿಪರ ಧೋರಣೆಯನ್ನುಳ್ಳ ಕುವೆಂಪು, ಕಾರತಂರು, ಕಟ್ಟೀಮನಿ, ಕಂಬಾರ, ಚದುರಂಗ, ಮಹದೇವ ಅವರ ಕಾದಂಬರಿಗಳು ಉಳಿದವುಗಳಿಗಿಂತ ವಿಶಿಷ್ಟವಾಗಿ ಕಾಣಿಸುತ್ತವೆ.

ನಾಲ್ಕುನೂರು ಪುಟಗಳಲ್ಲಿ ಹರಡಿಕೊಂಡಿರುವ ವೈಶಾಖ ಕಾದಂಬರಿ ಗ್ರಾಮೀಣ ಬದುಕಿನ ಅನೇಕ ಮಹತ್ವದ ಘಟನೆಗಳನ್ನು ತನ್ನ ಒಡಲಲ್ಲಿಟ್ಟುಕೊಂಡಿದೆ. ಉಸಿರಾಟದಷ್ಟು ಸಹಜವಾಗಿರುವ

ಮೈಸೂರು ಪ್ರದೇಶದ ಗ್ರಾಮ್ಯ ಭಾಷೆಯನ್ನಾಡುವ ಪಾತ್ರಗಳಿರುವಂತೆ ಶಿಷ್ಟ ಭಾಷೆಯನ್ನಾಡುವ ಪಾತ್ರಗಳೂ ಇವೆ. ಅನುಭವದ ಸಂಕೀರ್ಣತೆಯಿಂದ ಕಾದಂಬರಿ ತೀವ್ರ ಗಮನ ಸೆಳೆಯುತ್ತದೆ.

ಸಾಮಾನ್ಯವಾದ ಕಥೆಯೊಂದರಲ್ಲಿ ಇರಬಹುದಾದ ನಾಯಕ - ಖಳನಾಯಕ ಪ್ರಧಾನವಾದ ಕಥೆ ವೈಶಾಖದಲ್ಲಿಲ್ಲ. ಇಲ್ಲಿಯ ಕಥೆಯ ಕೇಂದ್ರಬಿಂದು ದರುಮನಹಳ್ಳಿಯಾಗಿದೆ. ದರುಮನಹಳ್ಳಿ ಭಾರತ ದೇಶದ ಯಾವುದೇ ಹಳ್ಳಿಯನ್ನು ಹೋಲುವಂತಿದೆ. ಹಳ್ಳಿಯ ವಾಸ್ತವ ಬದುಕಿನ ಚಿತ್ರಣವೇ ಕಾದಂಬರಿಯ ವಸ್ತುವಾಗಿದೆ. ಸಾಮಾನ್ಯ ಕಾದಂಬರಿಗಳಲ್ಲಿರುವ ಕಪ್ಪು - ಬಿಳುಪು ಚಿತ್ರಣ ಇಲ್ಲಿರದೆ, ಕಾದಂಬರಿ ಸಂಕೀರ್ಣ ಅನುಭವಗಳನ್ನು ಕಟ್ಟಿಕೊಡುತ್ತ ಓದುಗನ ಅನುಭವವನ್ನು ಹೆಚ್ಚಿಸುವಲ್ಲಿ ಸಹಾಯಕವಾಗುತ್ತದೆ.

ಈ ಕಾದಂಬರಿಗೆ ನಾಯಕ ಪಾತ್ರ ಪ್ರಧಾನವಾಗಿರದಿದ್ದರೂ ದಲಿತ ಯುವಕ ಲಕ್ಕನ ಬದುಕಿನ ವಿವಿಧ ಅನುಭವಗಳ ಮೂಲಕ ಕಾದಂಬರಿ ತನ್ನನ್ನು ತೆರೆದಿಟ್ಟುಕೊಳ್ಳುತ್ತಾ ಹೋಗುತ್ತದೆ. ಜನಜೀವನದ ಬದುಕಿನಲ್ಲಿ ಗಾಢವಾಗಿರುವ ಕಾಮ ಅಥವಾ ಲೈಂಗಿಕ ಪ್ರಕ್ರಿಯೆಗಳು ಇಲ್ಲಿ ಸಹಜವೆಂಬಂತೆ ನಡೆಯುತ್ತವೆ. ಇಲ್ಲಿ ಚಿತ್ರಿತವಾಗಿರುವ ಲೈಂಗಿಕ ಪರಿಕಲ್ಪನೆಗಳು ಗ್ರಾಮೀಣ ಜನಜೀವನದ ಭಾಗವಾಗಿ ಬಂದಿವೆ. ಬದುಕಿನೊಂದಿಗೆ ನಿರಂತರ ಹೋರಾಟ ನಡೆಸಿದ ದಿಟ್ಟ ಮಹಿಳೆಯರನ್ನು ಇಲ್ಲಿ ಕಾಣಬಹುದಾಗಿದೆ. ಈ ಅಸಮಾನ ವ್ಯವಸ್ಥೆಯ ಪಾವಿತ್ರ್ಯವನ್ನು ನಾಶಗೊಳಿಸುವಂತಹ ಕೆಲವು ಪ್ರಕರಣಗಳು ಇಲ್ಲಿ ಬಹಳ ಮುಖ್ಯವಾಗುತ್ತವೆ. ಲೈಂಗಿಕ ಕ್ರಿಯೆಗಳಲ್ಲಿ ನಡೆಯುವ ವರ್ಣಸಂಕರ, ಸಾಮಾಜಿಕ ಕ್ರಿಯೆಗಳಲ್ಲಿ ನಡೆಯದೇ ಇರುವ ದುರಂತವನ್ನು ಕಾದಂಬರಿ ಮನಮಿಡಿಯುವಂತೆ ಚಿತ್ರಿಸುತ್ತದೆ. ಲೈಂಗಿಕ ಕ್ರಿಯೆಯಲ್ಲಿ ಜಾತಿಯನ್ನೆಣಿಸದ ಮಡಿವಂತರು ಸಾಮಾಜಿಕ ಸಂದರ್ಭಗಳಲ್ಲಿ ಅದೆ ಜಾತಿಯನ್ನು ಮುಂದು ಮಾಡಿಕೊಂಡು ಬರುತ್ತಾರೆ. ರಾತ್ರಿಯಿಡೀ ಕೇರಿಯ ಹೆಣ್ಣುಗಳೊಂದಿಗೆ ಸುಖಿಸುವ ಊರ ಯಜಮಾನರು ಹಗಲಿನಲ್ಲಿ ಶಿವಾಚಾರ ಹೇಳುತ್ತಾರೆ. ಇಂತಹ ಸೂಕ್ಷ್ಮತೆಗಳನ್ನು ಕಾದಂಬರಿ ವಿವಿಧ ಘಟನೆಗಳ ಹಿನ್ನೆಲೆಯಲ್ಲಿ ಕಟ್ಟಿ ನಿಲ್ಲಿಸುವ ಪರಿ ಗಮನಸೆಳೆಯುವಂತಿದೆ.

ನಮ್ಮ ಗ್ರಾಮೀಣರು ಆರ್ಥಿಕ ಅಸಮಾನತೆ, ಸಾಮಾಜಿಕ ಅಸಮಾನತೆಯನ್ನು ಸಹಿಸಿದಂತೆ, ಲೈಂಗಿಕ ಅಸಮಾನತೆಯನ್ನು ಸಹಿಸಲಾರರು. ಭಾರತೀಯ ಕೌಟುಂಬಿಕ ಚೌಕಟ್ಟಿನಲ್ಲಿಯೇ ಲೈಂಗಿಕ ಕ್ರಿಯೆಗಳು ನಡೆಯಬೇಕೆಂಬ ನೀತಿಯಿದ್ದರೂ ಅಂತಹ ನೀತಿಯನ್ನವರು ಅನೀತಿಗೊಳಿಸುತ್ತಾರೆ. ಮೇಲುಜಾತಿಯ ಹೆಣ್ಣಿನೊಂದಿಗೆ ಕೆಳಜಾತಿಯ ಗಂಡು ಲೈಂಗಿಕ ಸಂಬಂಧ ಹೊಂದುವುದು ಅಪವಿತ್ರವೆಂದು ಗೊತ್ತಿದ್ದರೂ ಅವರು ಪಾವಿತ್ರ್ಯ ನಾಶಮಾಡುತ್ತಾರೆ. ಇಂತಹ ಹತ್ತಾರು ಘಟನೆಗಳನ್ನು ಕಾದಂಬರಿ ಒಳಗೊಂಡಿದೆ.

ಸಾಮಾಜಿಕ - ಧಾರ್ಮಿಕ ಕಟ್ಟಳೆಗಳನ್ನು ಮೀರಿ ನಿಲ್ಲುವ, ಎಲ್ಲಾ ರೀತಿಯ ಬಂಧನಗಳನ್ನು ಬಿಚ್ಚಿ ಹೊಗೆಯುವ ಕಾಮದ ಸ್ಥಿತಿಯನ್ನು ಕಾದಂಬರಿಕಾರರು ಬೇರೆ ಬೇರೆ ಹಂತಗಳಲ್ಲಿ ನಿರೂಪಿಸಿದ್ದಾರೆ. ನವ್ಯದವರ ಪ್ರಮುಖ ವಸ್ತುಗಳಾದ ಕಾಮ ಮತ್ತು ಸಾವು ಇಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಆದರೆ ನವ್ಯ ಕಾದಂಬರಿಗಳಲ್ಲಿ ಬರುವ ಸ್ವೇಚ್ಛಾಚಾರದ ಕಾಮ ಇದಾಗಿರದೆ, ಬದುಕಿನಲ್ಲಿ ಸಹಜವಾಗಿ ಸ್ಫೋಟಗೊಳ್ಳುವ ನೈಸರ್ಗಿಕ ಕಾಮ ಇದಾಗಿದೆ. ಈ ಕಾಮದ ಕತೆಗಳ ಹಿಂದೆ ಅನೇಕ ನೋವಿನ ಕಲೆಗಳೂ ಹೆಣೆದುಕೊಂಡಿವೆ. ಕಾಮದ ವಿಶ್ಲೇಷಣೆ ಸಂದರ್ಭದಲ್ಲಿ ಚದುರಂಗರು ನವ್ಯದವರಿಗಿಂತ ಭಿನ್ನರಾಗಿ ನಿಂತು, ಜೀವಪರ ಕಾಮವನ್ನು ಪ್ರಕಟಿಸುವುದರಿಂದ ಇಲ್ಲಿಯ ಲೈಂಗಿಕ ಪರಿಕಲ್ಪನೆಗಳು ಅಧ್ಯಯನ ಯೋಗ್ಯವೆನಿಸುತ್ತವೆ.

ಕಾಮಕ್ಕೆ ಕಟ್ಟಳೆ ಬಂಧನಗಳು ಜಾಸ್ತಿಯಾದಂತೆ, ಕಿತ್ತೊಗೆಯುವ - ಬಿಡುಗಡೆಗೊಳ್ಳುವ ಕ್ರಿಯೆಗಳು ತೀವ್ರವಾಗುತ್ತವೆ. ಈ ವಿಷಯವನ್ನು ಡಾ. ಸಿ. ಎನ್. ರಾಮಚಂದ್ರನ್ ಅವರು 'ವೈಶಾಖದ ಕೆಲವು ಒಳದನಿಗಳು' ಎನ್ನುವ ಲೇಖನದಲ್ಲಿ ಚೆನ್ನಾಗಿ ಗುರುತಿಸಿದ್ದಾರೆ. ಆದರೆ ಕಾದಂಬರಿಯಲ್ಲಿ ಕೇವಲ ಬಂಧನ ಬಿಡುಗಡೆಯ ಆಶಯ ಮಾತ್ರವಿರದೆ, ಬದುಕಿನ ಅನಿವಾರ್ಯ ಸತ್ಯಗಳು ಕೂಡಿಕೊಂಡಿವೆ. ಹೀಗಾಗಿ ಬಂಧನ - ಬಿಡುಗಡೆಯ ಪ್ರತೀಕದೊಳಗೆ ಜಾತಿ, ವರ್ಗ, ಮೇಲು, ಕೀಳು, ಪಾಪ, ಪುಣ್ಯ, ದಾಹ, ತೃಪ್ತಿಯಂತಹ ಅನೇಕ ಸಂಗತಿಗಳು ತಳುಕು ಹಾಕಿಕೊಳ್ಳುತ್ತವೆ. ಆದ್ದರಿಂದ ಇಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಅನೇಕ ಲೈಂಗಿಕ ಘಟನೆಗಳನ್ನು ಓದಿ ಮಡಿವಂತರಾಗಿ ಮೂಗು ಮುರಿಯುವುದಕ್ಕಿಂತ ಈ ಲೈಂಗಿಕ ಘಟನೆಗಳಿಗೆ ಕಾರಣವಾಗುವ ಹಸಿವು, ಬಡತನ, ಅಸಹಾಯಕತೆ, ಅನಿವಾರ್ಯತೆಗಳ ಕಡೆ ಕಣ್ಣು ಹಾಯಿಸಿ ಕಾರ್ಯ-ಕಾರಣ-ಸಂಬಂಧಗಳನ್ನು ಗುರುತಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಇಲ್ಲಿಯ ಲೈಂಗಿಕ ಕ್ರಿಯೆಗಳು ನಮಗೆ ಅನೈತಿಕ ಸಂಬಂಧಗಳಾಗಿ ಕಾಣಲು ಮುಖ್ಯವಾಗಿ ಈ ಅಸಮಾನತೆಯ ವ್ಯವಸ್ಥೆಯೇ ಕಾರಣವಾಗಿದೆ. ಅಂತೆಯೇ ನವ್ಯದವರು ವರ್ಣಿಸುವ ಕಾಮ ಪ್ರಸಂಗಗಳಿಗೂ, ಚದುರಂಗರಂತಹ ಪ್ರಗತಿಶೀಲ ಸಾಹಿತಿಗಳು ತೆರೆದಿಡುವ ಲೈಂಗಿಕ ಪ್ರಕ್ರಿಯೆಗಳಿಗೆ ತುಂಬಾ ವ್ಯತ್ಯಾಸವಿದೆ. ಇಲ್ಲಿಯ ಲೈಂಗಿಕ ಕ್ರಿಯೆಗಳ ಹಿಂದೆ ಈ ದೇಶದ ಬಡವರ, ದಲಿತರ, ಅಸಹಾಯಕರ, ಅಮಾಯಕರ ಕಣ್ಣೀರಿನ ಕತೆಯಿರುವುದನ್ನು ಕಾಣಬಹುದಾಗಿದೆ.

ವೈಶಾಖ ಸಂಕೀರ್ಣ ಅನುಭವಗಳನ್ನೊಳಗೊಂಡ ಕಾದಂಬರಿ. ಈ ಕಾದಂಬರಿಯ ವಿವಿಧ ಮಗ್ಗುಲುಗಳನ್ನು ಕುರಿತು ಈಗಾಗಲೇ ವಿಮರ್ಶಕರು ಚರ್ಚಿಸಿದ್ದಾರೆ. ಈ ಕಾದಂಬರಿಯ ವಸ್ತು, ವಿನ್ಯಾಸ, ಆಶಯ, ಭಾಷೆ, ತಂತ್ರ, ಪಾತ್ರಚಿತ್ರಣ, ಮಹಿಳೆಯರು, ವರ್ಗ - ವರ್ಣ, ಹೋರಾಟ ಇತ್ಯಾದಿ ವಿಷಯಗಳನ್ನು ಕುರಿತಂತೆ ಈಗಾಗಾಗಲೇ ಅನೇಕ ಲೇಖನಗಳು ಪ್ರಕಟವಾಗಿವೆ. ಇಂತಹ ಲೈಂಗಿಕ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಚದುರಂಗರಿಗೆ ಜಾತಿ ವಿನಾಶದ ಆಶಯಗಳನ್ನು ಹೇಳುವ

ಉದ್ದೇಶವಿದೆ. ಇಡೀ ಕಾದಂಬರಿಯಲ್ಲಿ ಮನಸ್ಸಿನಾಳದಲ್ಲಿ ಲಕ್ಕ ರುಕ್ಮಿಣಿಯಂತಹ ಪಾತ್ರಗಳು ಉಳಿದುಕೊಂಡರೂ ಓದುಗನನ್ನು ತೀವ್ರವಾಗಿ ಕಲಕುವುದು ದರುಮನಹಳ್ಳಿಯೇ ಆಗಿದೆಯೆಂಬುದನ್ನು ಗಮನಿಸಬಹುದು. ದರ್ಮದ ಹಳ್ಳಿಯ ಹೆಸರು ಅಪಭ್ರಂಶಗೊಂಡು ಅದು ಅಸಮಾನತೆಯ ವ್ಯವಸ್ಥೆಯ ಪ್ರತೀಕದಂತಿದೆ. ಇಲ್ಲಿಯ ಅನೈತಿಕ ಸಂಬಂಧಗಳ ಲೈಂಗಿಕ ಕ್ರಿಯೆಗಳ ಹಿನ್ನೆಲೆಯಲ್ಲಿ ಊರು ಪತನವಾಗುವುದನ್ನು ಕಾಣಬಹುದಾಗಿದೆ. ಇಂತಹ ಪತನಕ್ಕೆ ಕಾರಣವಾಗುವ ಲೈಂಗಿಕ ಸಂಬಂಧಗಳ ಹಿಂದಿರುವ ಮಿತಿ ಮತ್ತು ಸಾಧ್ಯತೆಗಳೆರಡನ್ನೂ ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಈ ವ್ಯವಸ್ಥೆಯ ಒಳತಿರುಳುಗಳು ಬಿಚ್ಚಿಕೊಂಡು ವೈಶಾಖದ ಬಿಸಿಲಗೆ ಹೊಳೆಯುತ್ತವೆ.

ಈ ಕಾದಂಬರಿಯ ಕೇಂದ್ರಬಿಂದುವಾದ ದರುಮನಹಳ್ಳಿ ತನ್ನ ಒಡಲೊಳಗೆ ಇಟ್ಟುಕೊಂಡಿರುವ ಅಸಮಾನತೆಯ ಗುಣದಿಂದಾಗಿ ತನ್ನಷ್ಟಕ್ಕೇ ತಾನೇ ಪತನವಾಗುತ್ತದೆ. ಆದರೆ ಪತನದ ಈ ಕಾರಣವನ್ನು ರುಕ್ಮಿಣಿ-ಲಕ್ಕರಂತವರ ಮೇಲೆ ಹೊರಿಸುತ್ತದೆ. ಈ ಕಾದಂಬರಿಯಲ್ಲಿ ಅನೇಕ ಹೆಣ್ಣು - ಗಂಡುಗಳ ಲೈಂಗಿಕ ಕ್ರಿಯೆಗಳು ಜರುಗುತ್ತವೆ. ಅವು ಯಾವುವೂ ಅಷ್ಟು ಮುಖ್ಯವಾಗದೆ ರುಕ್ಮಿಣಿ - ಲಕ್ಕರ ನಡುವಿನ ದೈಹಿಕ ಸಂಬಂಧವೇ ಪ್ರಮುಖವಾಗುತ್ತದೆ. ಇದರ ಹಿಂದೆ ಜಾತಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ವೈದಿಕ ಜಾಲದ ಬಲೆಗಳಿವೆ. ರುಕ್ಮಿಣಿ ಬ್ರಾಹ್ಮಣ ವಿಧವೆ, ಸಕೇಶಿ. ಯೌವನ ತುಂಬಿ ತುಳುಕುತ್ತಿರುವಾಗಲೇ ಗಂಡನನ್ನು ಕಳೆದುಕೊಂಡಿದ್ದಾಳೆ. ಮಕ್ಕಳನ್ನು ಕಾಣದ ಅನಾಥೆ. ಆದರೆ ಆಸರೆಗಾಗಿ ಕೃಷ್ಣಶಾಸ್ತ್ರಿಯಂತಹ ಮಾವನಿದ್ದಾನೆ. ಧರ್ಮನಿಷ್ಠೆಗೆ ಹೆಸರಾದ ಕೃಷ್ಣಶಾಸ್ತ್ರಿ, ವಿಷಯನಲಂಪಟನಲ್ಲದ ಕೃಷ್ಣಶಾಸ್ತ್ರಿ, ರುಕ್ಮಿಣಿಯನ್ನು ತನ್ನ ಸ್ವಂತ ಮಗಳ ಹಾಗೆ ನೋಡಿಕೊಳ್ಳುತ್ತಿದ್ದ ಕೃಷ್ಣಶಾಸ್ತ್ರಿ ಒಂದು ರಾತ್ರಿ ರುಕ್ಮಿಣಿಯೊಡನೆ ಸಂಭೋಗಕ್ಕೆ ತೊಡಗುತ್ತಾನೆ. ಹೀಗೆ ರುಕ್ಮಿಣಿಯ ಮೇಲೆ ಅವಳ ತಂದೆಯಂತಿರುವ ಮಾವ ಏರಿ ಹೋಗಿ ಸಂಭೋಗ ಕ್ರಿಯೆಗೆ ತೊಡಗಿದಾಗ ರುಕ್ಮಿಣಿ ಅದನ್ನು ನೇರವಾಗಿ ಪ್ರತಿಭಟಿಸದೆ ಮೌನವಾಗಿದ್ದುಕೊಂಡೇ ನರಳುತ್ತಾಳೆ. ಪಾಪಪ್ರಜ್ಞೆಯಿಂದ ತೊಳಲಾಡುತ್ತಾಳೆ. ಗುಪ್ತವಾಗಿದ್ದ ಈ ಲೈಂಗಿಕ ಬಯಕೆ ಮತ್ತೆ ಎಡೆ ಬಿಚ್ಚಿದಾಗ, ಆಳು ಲಕ್ಕನ ಮೇಲೆರೆಗಿ ಸಂಭೋಗ ಸುಖ ಪಡೆಯುತ್ತಾಳೆ. ರುಕ್ಮಿಣಿ ಹಾಗೆ ಒಂದೇ ತಿಂಗಳಿನ ಅವಧಿಯಲ್ಲಿ ಮಾವ ಕೃಷ್ಣಶಾಸ್ತ್ರಿ ಮತ್ತು ಆಳು ಲಕ್ಕ ಇವರೊಂದಿಗೆ ಲೈಂಗಿಕ ಸಂಬಂಧ ಹೊಂದಿದ್ದಕ್ಕಾಗಿ ಗರ್ಭ ಧರಿಸುತ್ತಾಳೆ. ಈ ವಿಷಯ ಊರಲ್ಲೆಲ್ಲಾ ಪುಕಾರಾಗಿ ಪಂಚಾಯಿತಿ ಕಟ್ಟೆಗೆ ಬಂದು ಪಂಚಾಯಿತಿ ಹಿರಿಯರು ಲಕ್ಕನನ್ನು ಅಪರಾಧಿಯನ್ನಾಗಿ ಮಾಡಿ ಹೊಡೆದು ಬಡಿದು ಹಿಂಸೆ ಕೊಟ್ಟು ಊರಿನಿಂದ ಹೊರ ಹಾಕುತ್ತಾರೆ. ಇತ್ತ ರುಕ್ಮಿಣಿಯ ಬ್ರಾಹ್ಮಣ ಕೇರಿಯ ಜನ ಅವಳನ್ನು ಶಪಿಸಿ ಘಟಸ್ಫೋಟ ಕರ್ಮ ಮಾಡಿ, ತಲೆಬೋಳಿಸಿ ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಿ ಊರಿನಿಂದ ಓಡಿಸಬೇಕೆಂದು ತೀರ್ಮಾನಿಸಿದಾಗ, ಸ್ವಾಭಿಮಾನಿಯಾದ ರುಕ್ಮಿಣಿ ಮನೆಯನ್ನೇ ತೊರೆದು ಹೊರಟು ಹೋಗುತ್ತಾಳೆ.

ಕೃಷ್ಣಶಾಸ್ತ್ರಿ ಮತ್ತು ಲಕ್ಕನೊಂದಿಗಿನ ರುಕ್ಮಿಣಿಯ ಸಂಭೋಗ ಕ್ರಿಯೆಗಳು ಒಂದೇ ನಾಣ್ಯದ ಎರಡು ಮುಖಗಳಿಂತದ್ದರೂ, ರುಕ್ಮಿಣಿ-ಲಕ್ಕರ ಲೈಂಗಿಕ ಸಂಬಂಧ ಈ ವ್ಯವಸ್ಥೆಯಲ್ಲಿ ಮಹಾ ಅಪರಾಧವಾಗಿ ಪಾಪದ ಕಾರ್ಯವಾಗಿ ವ್ಯಕ್ತವಾಗುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಲಕ್ಕ ಹೊಲೆಯರ ಜಾತಿಯವನಾಗಿರುವುದು. ಈ ಲೈಂಗಿಕ ಪಾವಿತ್ರ್ಯಕ್ಕೂ ಜಾತಿಯ ಪಾವಿತ್ರ್ಯಕ್ಕೂ ಒಂದಕ್ಕೊಂದು ಸಂಬಂಧವಿದೆ. ಸ್ವಜಾತಿಯ ಮುದುಕು ಮಾಡಿದ ಸಂಭೋಗ ಅಪರಾಧವಾಗದ ಈ ವ್ಯವಸ್ಥೆಯಲ್ಲಿ, ಅನ್ಯ ಜಾತಿಯ ಯುವಕ ಸಂಭೋಗದ ಆಕ್ರಮಣಕ್ಕೆ ಒಳಗಾದರೆ ಅದು ಮಹಾಪರಾಧವಾಗುತ್ತದೆ. ಬಹುದೊಡ್ಡ ಪಾಪದ ಕಾರ್ಯವಾಗುತ್ತದೆ. ಆದ್ದರಿಂದ ಚದುರಂಗರು ಚಿತ್ರಿಸಿರುವ ಈ ಲೈಂಗಿಕ ಸಂಬಂಧಗಳು ಕೇವಲ ಲೈಂಗಿಕ ಹಸಿವಿನ ಕ್ರಿಯೆಗಳಾಗಿರದೆ, ಭದ್ರವಾಗಿರುವ ಜಾತಿ ಗೋಡೆಗಳ ತಳಪಾಯವನ್ನು ವಿಶ್ಲೇಷಿಸುವ ಮಹತ್ವದ ದಾಖಲೆಗಳಾಗಿ ಕಾಣುತ್ತವೆ.

ರುಕ್ಮಿಣಿಯ ಗರ್ಭಧಾರಣೆಗೆ ಕೃಷ್ಣಶಾಸ್ತ್ರಿ ಕಾರಣವೋ ಎಂಬುದು ತಿಳಿಯದಂತಾದಾಗ ರುಕ್ಮಿಣಿ ಗೊಂದಲಕ್ಕೀಡಾಗುತ್ತಾಳೆ. ಇದಕ್ಕೆ ತಾನೇ ಕಾರಣವೆಂದು ಕೃಷ್ಣಶಾಸ್ತ್ರಿ ಹೇಳಿದರೂ ಪಂಚಾಯಿತಿ ಮಾಡುವವರ ಕಿವಿಗೆ ಈ ಮಾತು, ಕೇಳದಂತಾಗಿ, ಲಕ್ಕನನ್ನೇ ಅಪರಾಧಿ ಸ್ಥಾನದಲ್ಲಿರಿಸುತ್ತಾಳೆ. ಕೃಷ್ಣಶಾಸ್ತ್ರಿಯಂತ ಸಾತ್ವಿಕರು ಇಂತಹ ಕಾರ್ಯ ಮಾಡಲಾರರೆಂಬುದೇ ಪಂಚಾಯಿತಿಯವರ ನಂಬಿಕೆ. ಇಲ್ಲಿ ಬರುವ ಪಂಚಾಯಿತಿ ಇಡೀ ವ್ಯವಸ್ಥೆಯ ಪ್ರತೀಕದಂತಿದೆ. ಇಲ್ಲಿ ನ್ಯಾಯ ಕೊಡಲು ಬಂದ ಮುಖಂಡರೆಲ್ಲ ಕೊಳಕು ಜನ. ನಿತ್ಯ ಅತ್ಯಾಚಾರ ಶೋಷಣೆ ಮಾಡುತ್ತಾ ಬದುಕಿದವರು. ಇಂತವರಿಗೆ ನ್ಯಾಯ, ಅನ್ಯಾಯ, ಒಳ್ಳೆಯದು, ಕೆಟ್ಟದ್ದು ತಿಳಿಯಲಾರದು. ತಿಳಿದರೂ ಕೂಡ ಅವರು ಅದನ್ನು ಬಾಯಿಬಿಟ್ಟು ಹೇಳಲಾರರು. ಘಟನೆಯೊಂದನ್ನು ಸರಳೀಕರಿಸಿ ಶತಮಾನಗಳಿಂದ ಒಪ್ಪಿಕೊಂಡು ಬಂದ ಸತ್ತ ಸಂಪ್ರದಾಯಗಳನ್ನೇ ಮೂಲ ಮಾನದಂಡವನ್ನಾಗಿ ಮಾಡಿಕೊಂಡು ಲಕ್ಕನಿಗೆ ಶಿಕ್ಷೆ ವಿಧಿಸುವ ಈ ಪಂಚಾಯಿತಿಯ ಮುಖಂಡರು ಎಲ್ಲರಿಗಿಂತಲೂ ಕ್ರೂರವಾಗಿ ಕಾಣಿಸುತ್ತಾರೆ.

ಈ ಕಾದಂಬರಿಗಳಲ್ಲಿ ಇಂತಹ ಹತ್ತಾರು ಲೈಂಗಿಕ ಸಂಬಂಧಗಳ ಪ್ರಕರಣಗಳು ಕಾಣಿಸುತ್ತವೆ. ಆದರೆ ಅವು ಯಾವುವು ಮುಖ್ಯವಾಗದೆ, ಇದೊಂದೆ ಪ್ರಕರಣ ಮುಖ್ಯವಾಗಲು ಕಾರಣವೆಂದರೆ, ಬ್ರಾಹ್ಮಣ ಜಾತಿಯ ಹೆಣ್ಣು ಹೊಲೆಯರ ಜಾತಿಯ ಗಂಡಿನೊಂದಿಗೆ ಲೈಂಗಿಕ ಸಂಬಂಧ ಹೊಂದಿರುವುದೇ ಆಗಿದೆ. ಹೀಗೆ ಎರಡೂ ಕಡೆಯ ಲೈಂಗಿಕ ಸಂಬಂಧದ ಚಿತ್ರಣ ಸ್ಪಷ್ಟವಾಗಲೆಂದೇ ಕಾದಂಬರಿಕಾರರು ಇಂತಹ ಅನೇಕ ಘಟನೆಗಳನ್ನು ಕಟ್ಟಿ ನಿಲ್ಲಿಸಿದ್ದಾರೆ.

ಇದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದರೆ, ಇಲ್ಲಿರುವ ಲೈಂಗಿಕ ಸಂಬಂಧಗಳ ಘಟನೆಗಳ ಒಂದೆ ಜಾತಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಹಿತಾಸಕ್ತಿಗಳ ಮುಖವಾಡ ಅಡಗಿರುವುದನ್ನು

ಗುರುತಿಸಬಹುದಾಗಿದೆ. ಅಂತೆಯೇ ಇಲ್ಲಿ ಲೈಂಗಿಕ ಪಾವಿತ್ರ್ಯ ನಾಶದ ಜೊತೆಗೆ, ಜಾತಿ ಪಾವಿತ್ರ್ಯ ನಾಶದ ಕ್ರಿಯೆಯೂ ನಡೆದಿದೆ. ಇಂತಹ ಒಳನೋಟಗಳನ್ನೊಳಗೊಂಡಿದ್ದರಿಂದಲೇ ವೈಶಾಖ ಮಹತ್ವದ ಕೃತಿಯಾಗಿ ಕಾಣಿಸುತ್ತದೆ.

ಕೃಷ್ಣಶಾಸ್ತ್ರಿಗಳು ತಮ್ಮ ತೀರಿ ಹೋದ ಮಗನ ಹೆಂಡತಿ ರುಕ್ಮಿಣಿಯ ಮೇಲೆ ಲೈಂಗಿಕ ಅತ್ಯಾಚಾರವೆಸಗಿ ನಂತರದಲ್ಲಿ ಪಶ್ಚಾತ್ತಾಪ ಪಟ್ಟು ಈ ವಿಷಯವನ್ನು ಪಂಚಾಯಿತಿಯ ಹಿರಿಯರ ಮುಂದೆ ಹೋಗಿ ಹೇಳಿದರೂ ಯಾರೂ ನಂಬುವುದಿಲ್ಲ. ಅದೇ ಲಕ್ಕನೊಂದಿಗಿನ ಅನೈತಿಕ ಸಂಬಂಧವನ್ನು ಪ್ರಶ್ನಿಸುತ್ತಾರೆ, ಶಿಕ್ಷೆ ಕೊಡುತ್ತಾರೆ. ಕೃಷ್ಣಶಾಸ್ತ್ರಿಯಂತಹ ಸಂಪ್ರದಾಯಸ್ಥರು ಒಳ್ಳೆಯವರಾಗಿ ಕಾಣುವ ಪಂಚಾಯಿತಿ ಮುಖಂಡರ ಕಣ್ಣಿಗೆ, ಲಕ್ಕನಂತಹ ಕೆಳವರ್ಗದ ಯುವಕರು ಪುಂಡಪೋಕರಿಗಳಾಗಿ ಕಾಣುತ್ತಾರೆ. ಈ ಶಿಕ್ಷೆಗೆ ಒಳಗಾಗಬೇಕಾದವರು ಸಂಪ್ರದಾಯ, ಹಿರಿತನ, ಜಾತಿಯ ಮುಸುಕಿನಲ್ಲಿ ಪಾರಾಗಿ ಲಕ್ಕನಂತಹ ಅಮಾಯಕರು ಬಲಿಯಾಗುತ್ತಾರೆ.

# ಅಧ್ಯಾಯ ಐದು

# ಅಧ್ಯಯನದ ಫಲಿತಗಳು

ಚದುರಂಗ ಅವರು ಮೈಸೂರು ಜಿಲ್ಲೆಯ ಸೃಜನಶೀಲ ಕಾದಂಬರಿಕಾರರಲ್ಲಿ ಒಬ್ಬರಾಗಿದ್ದಾರೆ. ಇವರು ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಸ್ವತಃ ಚುದರಂಗರು ಹಳ್ಳಿಯಲ್ಲೇ ನೆಲೆನಿಂತು ಕೃಷಿಕರಾಗಿ ಕಷ್ಟದ ಬದುಕನ್ನು ಕಂಡವರು. ಅವರ ಈ ಅನುಭವ ವೈಶಾಖ ಕಾದಂಬರಿಯಲ್ಲಿ ಕಲಾತ್ಮಕ ಅಭಿವ್ಯಕ್ತಿಯನ್ನು ಕಂಡಿದೆ. ಕನ್ನಡ ಸಂಶೋಧನ ಜಗತ್ತಿನಲ್ಲಿ ಕೃತಿಕೇಂದ್ರಿತ ಅದರಲ್ಲೂ ಕಾದಂಬರಿಗಳನ್ನು ಆಧರಿಸಿದ ಅಧ್ಯಯನಗಳು ಪ್ರಸ್ತುತ ಅಧ್ಯಯನಕ್ಕೆ ಮಾದರಿಯಾಗಿವೆ. ವಿಶೇಷವಾಗಿ ಈ ಅಧ್ಯಯನದಲ್ಲಿ ಚದುರಂಗರ ವೈಯಕ್ತಿಕ ಬದುಕಿನ ವಿವರಗಳನ್ನು ಅವರ ಕಲಾತ್ಮಕ ಅಭಿವ್ಯಕ್ತಿಯೊಂದಿಗೆ ತುಲನೆ ಮಾಡುವ ಮೂಲಕ ಒಬ್ಬ ಸೃಜನಶೀಲ ಲೇಖಕನ ಅನುಭವಗಳು ಸಾಹಿತ್ಯ ಜಗತ್ತಿನಲ್ಲಿ ಅರಳುವ ಬಗೆಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ವೈಶಾಖ ಕಾದಂಬರಿಯ ಕಥಾ ಹಂದರದ ಆವರಣ ಮೈಸೂರು ಜಿಲ್ಲೆಯ ಹುಣಸೂರಿನ ಸುತ್ತಮುತ್ತಿನದು, ಗ್ರಾಮೀಣ ಪ್ರದೇಶದ ನಡೆ-ನುಡಿ, ಮಡಿ-ಮೈಲಿಗೆ, ಹಬ್ಬ-ಹರಿದಿನ, ಅರ್ಥ ಕಳೆದುಕೊಂಡ ಆಚಾರ-ವಿಚಾರಗಳು, ವ್ಯಕ್ತಿಗಳ ಆಕ್ರಮಣ-ಅಸಹಾಯಕತೆಗಳು, ಅನ್ಯಾಯ-ಅತ್ಯಾಚಾರಗಳು ಕಿತಾಪತಿ, ಕಿರುಕುಳಗಳು, ದ್ವೇಷ-ಅಸೂಯೆಗಳು, ಈ ಎಲ್ಲವುಗಳ ಮಧ್ಯೆ ಪ್ರೀತಿ ವಾತ್ಸಲ್ಯ, ಅನುಕಂಪ, ಪರಹಿತನಿಷ್ಠೆ ಉದಾತ್ತಾಗುಣ, ಮಾನವೀಯ ಮಿಡಿತಗಳು ಈ ಮುಂತಾದ ಅಂಶಗಳನ್ನು ಮನುಷ್ಯ ಲೋಕದ ಬಗೆ ಬಗೆಯ ಭಾವನೆ ಮತ್ತು ಕ್ರಿಯೆಗಳ ಜೊತೆಗೆ ಪ್ರಕೃತಿ ಲೋಕದಲ್ಲಿ ಜರುಗುವ ಆದರೆ ನೋಡಲು ಸಾಧ್ಯವಿಲ್ಲದ (ದುರ್ಲಭವಾದ) ಹಾವು ಮುಂಗುಸಿಗಳ ರೋಷ ಭೀಷಣ ಹೋರಾಟ, ಕಾಳಿಂಗಸರ್ಪ ಮತ್ತು ಕಟ್ಟಿರುವೆಗಳ ಬಲಾಬಲ ಪ್ರದರ್ಶನ ಸೆಣಸಾಟ, ಆನೆಯೊಂದರ ಹೆರಿಗೆಗೆ ಉಳಿದ ಆನೆಗಳು ರಚಿಸಿದ ಚಕ್ರವ್ಯೂಹ ಈ ಮುಂತಾದ ಅಂಶಗಳನ್ನು ಕುರಿತು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಕಾದಂಬರಿಯಲ್ಲಿ ಸಾಂಸ್ಕೃತಿಕವಾಗಿ ಹಲವಾರು ಅಂಶಗಳು ಒಳಗೊಂಡಿವೆ. ಕಾಡು ಹಳ್ಳಿಯೊಂದರ ಮಣ್ಣಿನ ಮಕ್ಕಳು, ಅವರ ಹಬ್ಬ, ಹರಿದಿನಗಳು, ಅವರ ಒಡನಾಟ, ಅಲ್ಲಿನ

ಕಾಡು, ಆ ಕಾಡಿನ ಪ್ರಾಣಿ ಪಕ್ಷಿಗಳ ಸಾಮೀಪ್ಯ, ಇವು ಆ ಮಣ್ಣು ಹಡೆದ ತನ್ನೊಡಲಿಗೆ ಭಾವಕೋಶವಾದ ಸವಿನೆನಪಿಗೆ ಅರ್ಪಿತವಾಗಿರುವ ಚದುರಂಗರ ವೈಶಾಖ ಕಾದಂಬರಿ ತಾನು ಯಾವುದಕ್ಕೆ ಅತ್ಯಂತ ಕೃತಜ್ಞವಾಗಿದೆ ಎನ್ನುವುದನ್ನು ಸೂಚಿಸುತ್ತದೆ. ಹಳ್ಳಿ, ಹಳ್ಳಿಯ ಸಮಾಜ, ಅಲ್ಲಿನ ಜನ, ಜೀವನ ಇವುಗಳಷ್ಟೇ ಅಲ್ಲದೇ ಇಡೀ ಪರಿಸರವೇ ಕಾದಂಬರಿಯ ಹಾಸುಹೊಕ್ಕಾಗುತ್ತದೆ.

ವೈಶಾಖ ಕಾದಂಬರಿಯ ಇನ್ನೊಂದು ಮುಖ್ಯವಾದ ಅಂಶವೆಂದರೆ ಭಾಷೆ ಬಳಕೆಯದು. ಉತ್ತಮ ಜಾತಿಯವರಾದ ರುಕ್ಮಿಣಿ ಹಾಗೂ ಕೃಷ್ಣಶಾಸ್ತ್ರಿಗಳ ಪ್ರಜ್ಞೆಯ ಮೂಲಕ ದಾಖಲಾಗುವ ವಿವರಕ್ಕೆಲ್ಲಾ ಶಿಷ್ಟ ಭಾಷೆಯನ್ನೂ, ದಲಿತನಾದ (ಹರಿಜನ ಜಾತಿಯ ಲಕ್ಕನ ಪ್ರಜ್ಞೆಯ ಮುಖಾಂತರ ದಾಖಲಾಗುವ ವಿವರಗಳಿಗೆಲ್ಲ ಗಟ್ಟಿಮುಟ್ಟಾದ ಗ್ರಾಮೀಣ ಭಾಷೆಯನ್ನು ಬಳಸಿ ವೈವಿಧ್ಯವನ್ನು ಮೆರೆದಿದ್ದಾರೆ. ಗ್ರಾಮೀಣ ಭಾಷೆಯಲ್ಲಿ ಬಳಕೆಯಾಗಿರುವ ಗಾದೆಗಳು (ಅನ್ನ ಅದೆ ಅಂತ ಉಂಡೋನು ಕೆಟ್ಟ, ಹೆಣ್ಣು ಅದೆ ಅಂತ ಹೋದೋನು ಕೆಟ್ಟ, ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ, ದನ ತಿನ್ನೋನಿಗೆ ಗೊಬ್ಬರದ ಆಣೆ, ಬರಿ ಮಾತಿನ ಕೆಂಪಿ ನಿನ್ನ ಬಾಯೆಲ್ಲ ಅಪರಂಜಿ) ಮತ್ತು ಒಗಟುಗಳು (ಕತ್ತಲೆ ಮನೆಯಲ್ಲಿ ಕರಿಯಪ್ಪ ಗುಟುರಾಕ್ತಾನೆ, ಉತ್ತರ ರಾಗಿಕಲ್ಲು ಪಂಚ ಮುಖದ ಕುದುರೆ ಪಾರ ತಿರುಗ್ತದೆ, ಉತ್ತರ ಮಜ್ಜಿಗೆ ಕಡಿಯೋ ಮಂತು ಎತ್ತ ಹೊಲದಲ್ಲಿ ತೆಕ್ಕೆ ಮಾಡಿಸಿ ಬಿದ್ದಿದೆ. ಉತ್ತರ ಉಳುವ ಹಗ್ಗ). ಹೀಗೆ ಚದುರಂಗರ ವೈಶಾಖ ಕಾದಂಬರಿಯು ಜನಪದದ ಆಶಯವನ್ನು ಶಿಷ್ಟ ರೂಪದಲ್ಲಿ ವ್ಯಕ್ತಪಡಿಸುವ ಅಪರೂಪದ ಕೃತಿಯಾಗಿದೆ. ಇಲ್ಲಿ ಜನಪದವು ಶಿಷ್ಟದೊಂದಿಗೆ ಸೇರಿರುವ ಬಗೆಯು ಪರಿಣಾಮಕಾರಿಯಾದುದಾಗಿದೆ. ಚದುರಂಗರ ಬರವಣಿಗೆಯು ಜನಪದದ ಸಾವಯವದಲ್ಲಿ ಬೇರು ಬಿಟ್ಟು ಶಿಷ್ಟದಲ್ಲಿ ಕಸಿಯಾದ ಅಪರೂಪದ ಸೃಷ್ಟಿಯಾಗಿದೆ.



"ಉರಿದು ಉಪ್ಪಾಗು-ಕೋಪಗೊಳ್ಳು, ಬಾವುಟ ಮ್ಯಾಲಾಗು-ಗೆಲ್ಲು, ಮುಂಡೆ ಕೂದ್ಲು ಚುಳ್ ಅನ್ನದಿರು-ಕೊಂಚವೂ ಕಷ್ಟ ಅನುಭವಿಸದೆ ಹಾಯಾಗಿರು, ಮಾತು ಆತುಕೊಳ್ಳು-ಕೇಳಿಸಿಕೊಳ್ಳು, ತಿಕ್ಕೆಗೇರು ಹುಯ್ಯ-ಎರಡು ಬಗೆ ಮುಂತಾದವು" ಗ್ರಾಮೀಣ ಪ್ರದೇಶದ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿ ಹಳ್ಳಿಗಾಡಿನ ಆವರಣವನ್ನು ಮೂಡಿಸುವುದರಲ್ಲಿ ಸಹಾಯಕವಾಗಿದೆ. ಹೀಗೆ ಶಿಷ್ಟದ ಎರಕದಲ್ಲಿ ಜಾನಪದದ ಜೀವ ಜಲವನ್ನು ಮಿಳಿತಗೊಳಿಸಿರುವುದು ಚದುರಂಗರ ಬರವಣಿಗೆಯ ವೈಶಿಷ್ಟ್ಯವಾಗಿದೆ. ಅದಕ್ಕೆ ವೈಶಾಖ ಕಾದಂಬರಿಯೇ ಉತ್ತಮ ನಿದರ್ಶನ.

ಇಂತಹ ಕೃತಿಯನ್ನು ಕನ್ನಡದ ಒಟ್ಟು ಕಾದಂಬರಿ ಪ್ರಕಾರದ ನಿಟ್ಟಿನಲ್ಲಿ ಗಮನಿಸಿದಾಗ ಕಾದಂಬರಿಗೆ ಇರುವ ಮಹತ್ವದ ಸ್ಥಾನ ಎಂತಹುದೆಂಬುದು ತಿಳಿದು ಬರುತ್ತದೆ. ಛಿದ್ರಗೊಳ್ಳುತ್ತಿರುವ

ಭಾರತೀಯ ಗ್ರಾಮೀಣ ಜಗತ್ತು, ಆಧುನಿಕತೆಯ ಪರಿವೇಶದಲ್ಲಿ ಮತ್ತಷ್ಟು ಗಟ್ಟಿಗೊಳ್ಳುತ್ತಿರುವ ಜಾತಿ ಇವೆಲ್ಲವುಗಳ ಹಿನ್ನೆಲೆಯಲ್ಲಿ ವೈಶಾಖ ಕಾದಂಬರಿಯ ಧ್ವನಿರಮ್ಯತೆ ಅದ್ಭುತವಾದುದಾಗಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಈ ಕೃತಿ ಪಡೆದುಕೊಳ್ಳುವ ಧ್ವನಿ ಸಾಧ್ಯತೆಗಳು, ಅರ್ಥವಿಸ್ತಾರಗಳು, ಭಿನ್ನ ವ್ಯಾಖ್ಯಾನಗಳನ್ನು ಅರ್ಥೈಸುವುದರ ಮೂಲಕವೂ ವೈಶಾಖ ಕಾದಂಬರಿಯ ಅಧ್ಯಯನ ಸಾಧ್ಯತೆಗಳನ್ನು ವಿಸ್ತರಿಸಬಹುದಾಗಿದೆ.

ಯಾವತ್ತೂ ಸೃಜನಶೀಲವಾದ ಕೃತಿಯೊಂದು ತನ್ನ ಸಮಕಾಲೀನವಾದ ಬದುಕಿನ ವಿವರಗಳನ್ನು ಒಳಗೊಂಡು ಅದು ಕಾಲದೊಂದಿಗೆ ನಿರಂತರವಾಗಿ ಬೆಳೆಯುತ್ತಲೇ ಹೋಗುತ್ತದೆ. ಸಾರ್ವತ್ರಿಕವಾದ ಆಯಾಮವನ್ನು ಪಡೆಯುತ್ತದೆ. ವೈಶಾಖವೂ ಇಂತಹ ಆಯಾಮವುಳ್ಳ ಕೃತಿಯಾಗಿದೆಯೆಂಬುದನ್ನು ಈ ಅಧ್ಯಯನದ ಸಂದರ್ಭದಲ್ಲಿ ವಿವರಿಸಬಹುದಾಗಿದೆ.

ವೈಶಾಖ ಕಾದಂಬರಿಯಲ್ಲಿ ಕಾಮಕ್ಕೆ ಸಂಬಂಧಿಸಿದ ಲೈಂಗಿಕ ವ್ಯವಹಾರಗಳಿಗೆ ಸಂಬಂಧಿಸಿದ ಸಂಗತಿಗಳು ವಿವರಗಳು ಪಡೆ ನುಡಿಗಳು ಮೇಲಿಂದ ಮೇಲೆ ಬರುತ್ತವೆ. ಕೃಷ್ಣಶಾಸ್ತ್ರಿ-ರುಕ್ಮಿಣಿ, ರುಕ್ಮಿಣಿ ಮತ್ತು ಲಕ್ಕ, ಲಕ್ಕ ಹಾಗೂ ಕೆಂಗಣ್ಣಪ್ಪನ ಸಲಿಂಗರತಿ, ಸ್ತ್ರೀಯರ ಮಾನಭಂಗ, ವ್ಯಭಿಚಾರ, ಮದುವೆಯಾದ ಹೆಣ್ಣು ಇನ್ನೊಬ್ಬ ಗಂಡಿನ ಜೊತೆ ಓಡಿ ಹೋಗುವುದು ಇನ್ನು ಪ್ರಾಯಕ್ಕೆ ಬರದಿದ್ದ ಹುಡುಗಿಯ ಮೇಲೆ ಅತ್ಯಾಚಾರದ ಪ್ರಯತ್ನ ನಡೆಯುವುದು, ಪಾದ್ರಿ ಹಾಗೂ ಮಠದ ಸ್ವಾಮಿ ವ್ಯಭಿಚಾರ ಮಾಡುವುದು ಇತ್ಯಾದಿ ವಿವರಗಳು ಇಲ್ಲಿವೆ. ಇಲ್ಲಿ ಒಂದು ಸಂಸಾರವೂ ಸರಿಯಾಗಿ ಬಾಳ್ವೆ ಮಾಡುವುದಿಲ್ಲ, ಕೆಂಗಣ್ಣಪ್ಪ ಎಂಬುವನು ಕಂಡ ಕಂಡ ಹೆಣ್ಣುಗಳ, ಗಂಡುಗಳ ಮೂಲಕ ತನ್ನ ಕಾಮಪಿಪಾಸೆ ತೀರಿಸಿಕೊಳ್ಳುವ, ಕಡೆಗೆ ಪುರಷತ್ವವನ್ನು ಕಳೆದುಕೊಂಡು ಅದನ್ನು ಮರಳಿ ಪಡೆಯಲು ಪುರುಷರತ್ನದ ಸೊಪ್ಪಿಗೆ ಮೊರೆ ಹೋಗುವುದು ಅವನ ಹತಾಶೆಯ ಸ್ಥಿತಿಯನ್ನು ತೋರಿಸುತ್ತದೆ.

ಕಾಮ ಮನುಷ್ಯನನ್ನು ಕಾಡುವ ಪರಿಯನ್ನು ವೈಶಾಖ ಕಾದಂಬರಿಯು ಅಸದೃಶವಾಗಿ ಚಿತ್ರಿಸುತ್ತದೆ. ಕಾಮ ಕಾಡುವ ಪರಿಗೆ ಕೆಂಗಣ್ಣಪ್ಪ ಒಂದು ಕೊನೆಯಾದರೆ ರುಕ್ಮಿಣಿ ಮತ್ತೊಂದು ಕೊನೆಯಾಗುತ್ತಾಳೆ. ರುಕ್ಮಿಣಿಯಲ್ಲಿ ಇಂತಹ ಅಭೀಪ್ಸೆಯು ಪ್ರಕೃತಿ ಸಹಜವಾದುದಾದರೆ ಕೆಂಗಣ್ಣಪ್ಪನದು ವಿಕೃತದ ಅಭಿವ್ಯಕ್ತಿಯಾಗಿದೆ.

ಕಾದಂಬರಿ ವಿಶಾಲವಾದ ಜಗತ್ತಿನಲ್ಲಿ ಕೇಶವಯ್ಯ ಎಂಬ ಗೋಸುಂಬೆ, ನೀತಿವಂತನ ವೇಷ ಧರಿಸಿದ್ದಾನೆ. ನಂಜೇಗೌಡ ಎನ್ನುವ ಇನ್ನೊಬ್ಬ ಕಾಮದ ವ್ಯವಹಾರದಲ್ಲೂ ಇತರ ವ್ಯವಹಾರಗಳಲ್ಲೂ ತುಂಬಾ ಕಾರುಬಾರಿಯಾದ ಮನುಷ್ಯ ಇದ್ದಾನೆ. ಇನ್ನು ಋತುಮತಿಯಾಗುವುದಕ್ಕಿಂತ ಮೊದಲಿನಿಂದಲೇ ತನ್ನ ಲೈಂಗಿಕ ವ್ಯವಹಾರ ಪ್ರಾರಂಭಿಸಿದ ಗಂಗಿ

ಇದ್ದಾಳೆ. ಮನುಷ್ಯನ ಸುಪ್ತ ಪ್ರಜ್ಞೆಯನ್ನು ಕಾಡುವ ಅವನ ಎಂದೆಂದಿಗೂ ತೀರದ ಕಾಮದ ಅಭೀಪ್ಸೆಯ ಸಂಕೇತವಾಗಿ ಈ ಎಲ್ಲಾ ಪಾತ್ರಗಳು ಒಡಮೂಡಿವೆ. ಹಾಗೆಯೇ ಈ ಕಾಮವು ಬದುಕಿನ ಉಳಿದೆಲ್ಲಾ ವಿವರಗಳಂತೆಯೇ ಒಂದರೊಳಗೊಂದು ಹಾಸಹೊಕ್ಕಾಗಿ ಅವರ ಬದುಕಿನ ವಿಧನಾವನ್ನು ಪ್ರಭಾವಿಸುವ, ನಿರ್ಧರಿಸುವ, ಕಡೆಗೆ ಅಹಂನ ಒಂದು ಭಾಗವಾಗಿ ಅಧಃಪತನ ಸೂಚಕವಾಗಿಯೂ ಮೂಡಿರುವುದನ್ನು ಕಾದಂಬರಿಯ ಕಥಾ ಸಂವಿಧಾನದ ನೆಲೆಯಲ್ಲಿ ಗಮನಿಸಬಹುದಾಗಿದೆ.

ಇಷ್ಟಲ್ಲದೆ ವೈಶಾಖ ಕಾಂದಬರಿಯ ಕೇಂದ್ರವಾದ ದರುಮನ ಹಳ್ಳಿಯ ವರ್ಗ, ವರ್ಣ, ಜಾತಿ ಸಂಘರ್ಷಗಳ ಸೂಕ್ಷ್ಮಗಳನ್ನು ದೇಶೀನೆಲೆಗಟ್ಟಿನಿಂದ, ಪ್ರಾಣಿ, ಪಕ್ಷಿ, ಕಾಡಿನ ಜಗತ್ತಿನ ನೆಲೆಗಟ್ಟಿನಿಂದಲೂ ಚಿತ್ರಿಸಿರುವುದು ಅರ್ಥಪೂರ್ಣವಾಗಿದೆ. ಕಾದಂಬರಿಯ ವಿವರಗಳಲ್ಲಿ ಬರುವ ಜನಪದ ಹಾಡು, ಕಥೆ, ನಿರೂಪಣೆ, ಕಥನ ಕ್ರಮ ಎಲ್ಲವೂ ಕಾದಂಬರಿಯ ಕೇಂದ್ರ ಉದ್ದೇಶವನ್ನು ನೆರವೇರಿಸುವ ನಿಟ್ಟಿನಲ್ಲಿ ಕ್ರೋಢೀಕರಣಗೊಂಡು ಕಲಾತ್ಮಕ ಅಭಿವ್ಯಕ್ತಿಯನ್ನು ಪಡೆದಿರುವುದು ಮತ್ತು ಯಶಸ್ವಿಯಾಗಿರುವುದನ್ನು ಕಂಡುಕೊಳ್ಳಲಾಗಿದೆ.

ಚದುರಂಗರು ಪ್ರಗತಿಶೀಲ ಹಿನ್ನೆಲೆಯವರಾಗಿರುವುದು ಸಹ ಈ ಕಾದಂಬರಿಯ ಒಟ್ಟು ಧೋರಣೆಯನ್ನು ಪ್ರಭಾವಿಸಿದಂತಿದೆ. ಇಲ್ಲಿ ಸೂಕ್ಷ್ಮವಾಗಿ ಎಡಪಂಥೀಯ ಚಿಂತನೆಗಳ ಕ್ರಿಯಾತ್ಮಕ ಅಭಿವ್ಯಕ್ತಿಯನ್ನೂ ಕಾಣಬಹುದಾಗಿದೆ. ವರ್ಗ, ವರ್ಣ, ಜಾತಿ, ಲಿಂಗ ಇವುಗಳ ಆಧಾರದಲ್ಲಿ ಶೋಷಣೆಗೆ ಒಳಗಾದವರ ಪರವಾದ ಧ್ವನಿಯಿದೆ. ಹಾಗಂತ ಚದುರಂಗರು ಅವರ ಪರ ವಾಚ್ಯವಾಗಿ ವಕಾಲತ್ತನ್ನೇನೂ ವಹಿಸಿಲ್ಲ. ಪಾತ್ರಗಳ ಸಂದರ್ಭ, ಸನ್ನಿವೇಶ ಆ ಮೂಲಕ ಪ್ರವಹಿಸುವ ಅವರ ಜೀವನಾನುಭವದ ಕಥನವೇ ಅದನ್ನೆಲ್ಲಾ ಕಲಾತ್ಮಕ ನೆಲೆಯಲ್ಲಿ ವಿಶದೀಕರಿಸುತ್ತದೆ. ಸಹಜವಾಗಿಯೇ ಬಡವರು, ಶೋಷಿತರು, ಇಲ್ಲದವರು ವೈಶಾಖದ ಕಥಾ ಭಿತ್ತಿಯಲ್ಲಿ ಪ್ರಜ್ವಲಿಸುವ ನಕ್ಷತ್ರಗಳಾಗಿದ್ದಾರೆ. ಹಾಗಾಗಿಯೇ ಚದುರಗಂರು ಕನ್ನಡದ ಮಹತ್ವದ ಲೇಖಕರೂ ಕಾದಂಬರಿಕಾರರೂ ಆಗಿದ್ದಾರೆ.

# ಚದುರಂಗ ಬದುಕು ಬರಹ

ಕನ್ನಡ ಸಾಹಿತ್ಯ ಲೋಕದಲ್ಲಿ ಚದುರಂಗ ಎಂದೇ ಅಪಾರ ಖ್ಯಾತಿಯನ್ನು ಹೊಂದಿರುವ ಎಂ. ಸುಬ್ರಹ್ಮಣ್ಯ ರಾಜ ಅರಸು ಅವರ ನಿಜ ನಾಮಧೇಯವನ್ನೇ ಮರೆಸಿದ ಖ್ಯಾತಿ ಚದುರಂಗ ಕಾವ್ಯನಾಮದ್ದು. ಚದುರಂಗ ಅವರು ಜನಿಸಿದ್ದು ೧೯೧೬ರ ಜನವರಿ ೧ ರಂದು. ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕಲ್ಲಹಳ್ಳಿ ಅವರ ಜನ್ಮಸ್ಥಳ. ಮುದ್ದು ರಾಜೇ ಅರಸರು ಚದುರಂಗ ಅವರ ತಂದೆ. ಅರಸು ಮನೆತನಕ್ಕೆ ಸೇರಿದ ದೇವರಾಜೇ ಅರಸು ಮಗಳು ಮರುದೇವಮ್ಮಣ್ಣಿ ಚದುರಂಗರ ತಾಯಿ. ಇವರಿಗೆ ೧೩ ಮಂದಿ ಮಕ್ಕಳಾದರೂ ಉಳಿದು ಬದುಕಿದ್ದುದು ನಾಲ್ಕು ಮಕ್ಕಳು ಮಾತ್ರ. ಈ ನಾಲ್ಕರಲ್ಲಿ ಕೊನೆಯವರೇ ಚದುರಂಗರು. ಹೊಸಗನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಹೀಗೆ ಎಲ್ಲಾ ಕಾಲಘಟ್ಟಗಳ ಕಸುವನ್ನು ಪಡೆದು ತಮ್ಮದೇ ಆದ ತನವನ್ನು ಉಳಿಸಿಕೊಂಡಿದ್ದಾರೆ. ಚದುರಂಗರು ಕೃಷಿ, ಸಾಹಿತ್ಯ, ಚಟುವಟಿಕೆ ಮೂರೂ ಕ್ಷೇತ್ರಗಳಲ್ಲಿ ದುಡಿದರು.

ಪೂರ್ವಿಕರ ಇತಿಹಾಸ ಗಮನಿಸಿದಾಗ ಚದುರಂಗರ ತಂದೆಯ ಕಡೆಯಿಂದ ತಲಕಾಡಿನ ಗಂಗ ಅರಸರ ವಂಶಕ್ಕೂ, ತಾಯಿಯ ಕಡೆಯಿಂದ ಅರಸು ಮತ್ತು ಕವಿ ಎರಡೂ ಆಗಿದ್ದ ಮೂರನೇ ಮಂಗರಸನ ವಂಶಕ್ಕೂ ಸೇರಿದವರು. ಈ ಬಗೆಯ ಪೂರ್ವಿಕರ ಇತಿಹಾಸದಲ್ಲಿ ಹೆಸರು ಮಾಡಿದವರು ಚದುರಂಗರು. ಕನ್ನಡ ಸಾಹಿತ್ಯಲೋಕದಲ್ಲಿ ಒಂದು ಇತಿಹಾಸ ನಿರ್ಮಿಸಿ ಹೋದವರು.

ಚದುರಂಗರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಮೈಸೂರಿನಲ್ಲಿ ನಡೆಯಿತು. ಹೈಸ್ಕೂಲು ಓದುತ್ತಿರುವಾಗಲೇ ಗಾಂಧಿ ಪ್ರಭಾವ, ಮೆಟ್ರಿಕ್ ತೇರ್ಗಡೆಯಾದ ನಂತರ ವೈದ್ಯನಾಗಬೇಕೆಂಬ ಉದ್ದೇಶದಿಂದ ಬೆಂಗಳೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಸೇರಿ ಅಲ್ಲಿಯೇ ಸಾಹಿತ್ಯ ಕೃಷಿಯನ್ನು ಆರಂಭಿಸಿದರು.

ಬಿ. ಎಂ. ಶ್ರೀ. ಅವರು ಚದುರಂಗರ ಬರಹವನ್ನು ಮೆಚ್ಚಿಕೊಂಡರು. ಜೊತೆಗೆ ಕಾವ್ಯ ಕ್ಷೇತ್ರಕ್ಕಿಂತ ಗದ್ಯದಲ್ಲಿಯೇ ತೊಡಗಿಕೊಳ್ಳಲು ಸಲಹೆ ನೀಡಿದರು. ಈ ಸಲಹೆ ಚದುರಂಗರಿಗೆ

ಕಥೆ ಕಾದಂಬರಿಗಳನ್ನು ಬರೆಯಲು ಪ್ರೇರೇಪಿಸಿತು. ಇದರ ಪರಿಣಾಮ ಕಥಾ ಸಾಹಿತ್ಯದಲ್ಲಿ ಖ್ಯಾತಿಯನ್ನು ಪಡೆದರು. ಜೊತೆಗೆ ಕಾರ್ಲ್‌ಮಾರ್ಕ್ಸ್‌ನ ಸಿದ್ಧಾಂತ ಮತ್ತು ಕಮ್ಯುನಿಸ್ಟ್ ಪಕ್ಷದ ಪ್ರಭಾವಕ್ಕೊಳಗಾದರು.

ವ್ಯಾಸಂಗದ ಅವಧಿಯಲ್ಲಿ ಅಖಿಲ ಮೈಸೂರು ವಿದ್ಯಾರ್ಥಿ ಫೆಡರೇಷನ್ನಿನ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದರು. ಈ ಒಕ್ಕೂಟಕ್ಕೆ ನಿಧಿ ಸಂಗ್ರಹಿಸಲು ಮೈಸೂರು ಸಂಸ್ಥಾನದಾದ್ಯಂತ ಸಂಚರಿಸುವಾಗ ಚಿತ್ರದುರ್ಗದ ತ. ರಾ. ಸು. ಅವರ ಪರಿಚಯವಾಯಿತು. ಈ ಅಲೆದಾಟದಿಂದ ಆರೋಗ್ಯ ಕೆಟ್ಟು ಪರೀಕ್ಷೆಗೆ ಹಾಜರಾಗದೆ ಚದುರಂಗರು ಮಾನವಿಕಗಳನ್ನು ತೆಗೆದುಕೊಂಡು ೧೯೪೨ ರಲ್ಲಿ ಬಿ. ಎ. ಪದವೀಧರರಾದರು. ಮಹಾರಾಜ ಕಾಲೇಜಿನಲ್ಲಿ ಓದುವಾಗ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿದ್ದರು. ಈ ಸಂದರ್ಭದಲ್ಲಿ ಅವರ ಮನದ ಬಯಕೆ ಎಂಬ ಕವನ ಕಾಲೇಜು ಪತ್ರಿಕೆಯಲ್ಲಿ ಪ್ರಕಟವಾಯಿತು.

ಪದವಿಯ ನಂತರ ಪೂನಾಗೆ ತೆರಳಿ ಅಲ್ಲಿ ಕಾನೂನು ಮತ್ತು ಎಂ. ಎ. ಪರೀಕ್ಷೆಗನ್ನು ಮುಗಿಸಿದರು. ಈ ಹೊತ್ತಿಗೆ ಚದುರಂಗ ಅವರಿಗೆ ಚಲನಚಿತ್ರದತ್ತ ಆಸಕ್ತಿ ಮೂಡಿತು. ರಾಜ್ ಅರಸ್ ಎಂಬ ನಾಮಾಂಕಿತದಲ್ಲಿ ಮುಂಬಯಿನ ಸೌಂಡ್ ಮಿರರ್ ಮತ್ತು ಫಿಲಂ ಇಂಡಿಯಾ ಎಂಬ ಇಂಗ್ಲೀಷ್ ಭಾಷೆಯ ಸಿನಿಮಾ ಪತ್ರಿಕೆಗಳಿಗೆ ಹಿಂದಿ ಸಿನಿಮಾಗಳ ಬಗ್ಗೆ ಅಂಕಣ ಬರೆದರು. ಪೂನಾದಿಂದ ಹಿಂದಿರುಗಿದ ಮೇಲೆ ಅವರಿಗೆ ಗೊತ್ತಾದದ್ದು ತಮ್ಮ ಅಣ್ಣನವರಾದ ಬಸವರಾಜ ಅರಸರು ಚದುರಂಗ ಅವರಿಗೆ ತಿಳಿಸದೆಯೆ ಮದುವೆ ನಿಗಧಿ ಮಾಡಿದ್ದರು. ಈ ಮೊದಲು ಪ್ರೀತಿಸುತ್ತಿದ್ದ ದೊಡ್ಡಮ್ಮಣ್ಣಿಯವರನ್ನು ಚದುರಂಗ ಅವರು ಹಲವು ಕಾರಣಗಳಿಂದ ಮದುವೆಯಾಗಲಾಗಿರಲಿಲ್ಲ. ಆದರೆ ಅವರ ಅಣ್ಣನವರು ಇವರಿಗೆ ಮದುವೆ ಹೆಣ್ಣನ್ನು ಗೊತ್ತು ಮಾಡಿ ನಿಶ್ಚಿತಾರ್ಥ ಮಾಡಿದ್ದುದು ಚದುರಂಗ ಅವರನ್ನು ಕೆರಳಿಸಿತು. ಈ ಮೊದಲು ಪ್ರೀತಿಸುತ್ತಿದ್ದ ದೊಡ್ಡಮ್ಮಣ್ಣಿಯವರಿಗೆ ಮದುವೆಯಾದರೂ ಸಹ ಅವರಿಂದ ಮೊದಲ ಪತಿಗೆ ವಿಚ್ಛೇಧನ ಕೊಡಿಸಿ ಮದ್ರಾಸಿನಲ್ಲಿ ರಿಜಿಸ್ಟರ್ ಮದುವೆಯಾದರು. ಈ ಮದುವೆಗೆ ಚದುರಂಗ ಅವರ ಬಂಧುಗಳಾರೂ ಹಾಜರಾಗಲಿಲ್ಲ.

ಆರಂಭದ ದಿನಗಳಲ್ಲಿ ಮಾಸ್ತಿಯವರ ಪ್ರಭಾವಕ್ಕೆ ಒಳಗಾಗಿದ್ದು ಕೊನೆಯವರೆಗೂ ತಮ್ಮ ನಿರೂಪಣಾ ವಿಧಾನವನ್ನು ಅದೇ ಮಾದರಿಯಲ್ಲಿ ಬಳಸಿದರು. ಚದುರಂಗರೇ ಹೇಳಿಕೊಳ್ಳುವಂತೆ ನಾನು ಮಾರ್ಕ್ಸ್ ಹಾಗೂ ಪ್ರಗತಿಶೀಲ ಚಳವಳಿಯಿಂದ ಆಕರ್ಷಿತನಾದೆ ಎಂದಿದ್ದಾರೆ. ಕ್ರಮಕ್ರಮೇಣ ಮಾಸ್ತಿಯವರ ಹೊಕ್ಕಳು ಬಳ್ಳಿ ಸಂಬಂಧವನ್ನು ಆದಷ್ಟು ಕಡಿದುಕೊಳ್ಳಲು ಪ್ರಯತ್ನಪಟ್ಟಿದ್ದುದಾಗಿ ಹೇಳಿಕೊಳ್ಳುತ್ತಾರೆ.

**೧. ಕಥಾಸಂಕಲನಗಳು**

೧. ಸ್ವಪ್ನ ಸುಂದರಿ ೧೯೪೮

೨. ಶವದ ಮನೆ ೧೯೫೦

೩. ಇಣುಕು ನೋಟ ೧೯೫೦

೪. ಬಂಗಾರದ ಗೆಜ್ಜೆ ೧೯೫೧

೫. ಮೀನಿನ ಹೆಜ್ಜೆ ೧೯೫೮

೬. ಕ್ವಾಟೆ ೧೯೯೨

೭. ಮೃಗಯಾ ೧೯೯೪

೮. ಸಮಗ್ರ ಕಥೆಗಳು ೧೯೯೯

**೨. ಕಾದಂಬರಿಗಳು**

೧. ಸರ್ವಮಂಗಳಾ ೧೯೫೦

೨. ಉಯ್ಯಾಲೆ ೧೯೬೦

೩. ವೈಶಾಖ ೧೯೮೧

೪. ಹೆಜ್ಜಾಲ ೧೯೯೮

೫. ನಾಟಕ ಹಾಗೂ

**೩. ಬಾನುಲಿ ಸಾಹಸಗಳು**

೧. ಸತ್ಯದ ಜೋಕು ೧೯೬೪

೨. ಕುಮಾರ ರಾಮ ೧೯೬೬

೩. ಇಲಿ ಬೋನು ೧೯೮೦

೪. ಬಿಂಬ ೧೯೯೦

**೪. ಚದುರಂಗ ಅವರ ಹನಿಗವನ ಸಂಕಲನ**

೧. ಅಲೆಗಳು ೧೯೮೯

೫. ಚಲನಚಿತ್ರಗಳು

೧. ಭಕ್ತ ರಾಮದಾಸ ಚಿತ್ರಕಥೆ ೧೯೪೮

೨. ಮಾಯಾ ಇಂಗ್ಲೀಷ್ ಚಿತ್ರಕಥೆಗೆ ನೆರವು

೩. ಟಾರ್ಜನ್ ಗೋಸ್ ಇಂಡಿಯಾ ತಯಾರಿಕೆಯಲ್ಲಿ ಭಾಗಿ

೪. ಸರ್ವಮಂಗಳ ಚಿತ್ರಕಥೆ ಸಂಭಾಷಣೆ, ನಿರ್ದೇಶನ

೫. ಉಯ್ಯಾಲೆ ಸಿನಿಮಾದ ಕಥೆ ಸಂಭಾಷಣೆ ೧೯೬೫

೬. ಸಾಕ್ಷ್ಯಚಿತ್ರಗಳು

೧. ರಾಷ್ಟ್ರಕವಿ ಕುವೆಂಪು ಸಾಕ್ಷ್ಯಚಿತ್ರದ ಚಿತ್ರಕಥೆ, ನಿರ್ದೇಶನ ೧೯೭೧

೨. ಕರ್ನಾಟಕ ಸಾಕ್ಷ್ಯಚಿತ್ರದ ಚಿತ್ರಕಥೆ, ನಿರ್ದೇಶನ ೧೯೭೫

೩. ನೃತ್ಯ ಕಲಾವಿದೆ ವೆಂಕಟಲಕ್ಷ್ಮಮ್ಮ, ಚಿತ್ರಕಥೆ, ನಿರ್ದೇಶನ, ೧೯೯೧

೭. ಲೇಖನಗಳು

೧. ತ. ರಾ. ಸು. ಬದುಕು ಬರಹ

೨. ದೇ. ಜ. ಗೌ. ಮತ್ತು ಕನ್ನಡ ಹೆಂಗರುಳು, ದೇ. ಜ. ಗೌ. ಅಭಿನಂದನಾ ಗ್ರಂಥಕ್ಕೆ ಲೇಖನ

೩. ಅನುಪಮಾ ನಿರಂಜನರ ಮೊದಲ ಕಥಾಸಂಕಲನ ಕಣ್ಮಣಿಗೆ ಮುನ್ನುಡಿ

೪. ಅನುಪಮಾ ನಿರಂಜನ ಮತ್ತು ಸಾಧನೆ

೫. ಶ್ರೀಕೃಷ್ಣ ಆಲನಹಳ್ಳಿ ನಿಧನಕ್ಕೆ ಸಂತಾಪ ಸೂಚಕ ಲೇಖನ

೬. ಚಿನ್ನದ ಗರಿ ಪುಸ್ತಕಕ್ಕೆ ಕನ್ನಡ ಕಥಾ ಸಾಹಿತ್ಯ ಮತ್ತು ಚಲನಚಿತ್ರ ಎಂಬ ಲೇಖನ

೭. ಮೈಸೂರು ನಗರದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಗತಿ, ತರಂಗ ಪತ್ರಿಕೆಗೆ ದಸರೆಯ ವಿಶೇಷ ಲೇಖನ.

೮. ಧರ್ಮಸ್ಥಳದ ಸಾಹಿತ್ಯ ಸಭೆಯಲ್ಲಿ ವಿಶ್ವಶಾಂತಿಗೆ ಸಾಹಿತ್ಯದ ಕೊಡುಗೆ ಪ್ರಬಂಧ ಮಂಡನೆ

೯. ಸಾಹಿತ್ಯ ಮತ್ತು ಪ್ರತಿಭಟನೆ

೧೦. ಮಾಸ್ತಿ ಒಂದು ಸೃಜನಾತ್ಮಕ ನೆನಪು

## ೮. ಪ್ರಶಸ್ತಿಗಳು

೧. ರಾಜ್ಯೋತ್ಸವ ಪ್ರಶಸ್ತಿ, ೧೯೮೧

೨. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೮೧

೩. ವೈಶಾಖಕ್ಕೆ ರಾಜ್ಯಸಾಹಿತ್ಯ ಅಕಾಡೆಮಿ ವಿಶೇಷ ಬಹುಮಾನ, ೧೯೮೧

೪. ವೈಶಾಖಕ್ಕೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೮೨

೫. ಸರ್ವಮಂಗಳಾ ನಿರ್ದೇಶನಕ್ಕೆ ಮೂರನೇ
ಅತ್ಯುತ್ತಮ ಚಿತ್ರನಿರ್ದೇಶನ ಪ್ರಶಸ್ತಿ, ೧೯೬೮

೬. ಗ್ರಾಮಜೀವನದ ಅತ್ಯುತ್ತಮ ಕಥಾಲೇಖಕ,
ಅತ್ಯುತ್ತಮ ಸಂಭಾಷಣೆಗೆ ಪ್ರಶಸ್ತಿ, ೧೯೬೮

೭. ಉಯ್ಯಾಲೆ ಚಿತ್ರದ ಅತ್ಯುತ್ತಮ ಸಂಭಾಷಣೆಗೆ ಪ್ರಶಸ್ತಿ, ೧೯೬೯

೮. ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ

೯. ವ್ಯಕ್ತಿ ಅಭಿವ್ಯಕ್ತಿ, ಚದುರಂಗರ
ಅಭಿನಂದನಾ ಗ್ರಂಥ, ೧೯೮೯, ಸಂ. ಡಿ. ಎ. ಶಂಕರ್

## ಪರಾಮರ್ಶನ ಗ್ರಂಥಗಳು


೧. ಅರವಿಂದ ಮಾಲಗತ್ತಿ, ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨.

೨. ಅರ್ಜುನ ಗೊಳಸಂಗಿ, ದಲಿತಜ್ಞ, ದಲಿತ ಸಾಹಿತ್ಯ ಪರಿಷತ್ತು ರಾಜಘರ್ಬ ೨೦೦೦, ಗದಗ.

೩. ಅರ್ಜುನ ಗೊಳಸಂಗಿ, ಕನ್ನಡ ದಲಿತ ಸಾಹಿತ್ಯಸಮಾಲೋಕನ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು ೨೦೦೩

೪. ಅಗ್ರಹಾರ ಕೃಷ್ಣಮೂರ್ತಿ ಸಂ. ಡಿ. ಆರ್ ನಾಗರೀಜ ಸಂಸ್ಕೃತಿಕಥನ, ಕನ್ನಡ ಪುಸ್ತಕ ಪ್ರಾಧಿಕಾರ.

೫. ಆಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು, ೨೦೦೩.

೬. ಅಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ ಧಾರವಾಡ ೧೯೯೪.

೭. ಅಮೂರ ಜಿ.ಎಸ್. ಕನ್ನಡ ಶಾಸ್ತ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೨೦೦೧.

೮. ಗೋವಿಂದರಾಜ ಗಿರಡ್ಡಿ, ಸಣ್ಣಕಥೆಯ ಹೊಸ ಒಲವುಗಳು ೧೯೭೮.

೯. ಧರಣೀದೇವಿ ಮಾಲಗತ್ತ ಸ್ತ್ರೀವಾದ ಮತ್ತು ಭಾರತೀಯತೆ ಚೇತನ ಬುಕ್ ಹೌಸ್ ಮೈಸೂರು ೧೯೯೮.

೧೦. ದೇಯ್ಯ ಹರವೆ, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೧೯೯೧.

೧೧. ದುರ್ಗಾದಾಸ್ ಕೆ.ಆರ್. ಮೂರು ದಲಿತ ಕಮ್ಮಟಗಳು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೧೯೯೬.

೧೨. ನಾಗರಾಜ ಡಿ.ಆರ್. ಸಾಹಿತ್ಯ ಕಥನ, ಅಕ್ಷರ ಪ್ರಕಾಶನ ಸಾಗರ ೧೯೯೬.

೧೩. ನಾಗರಾಜ ಡಿ.ಆರ್. ಅವೃತ ಮತ್ತು ಗರುಡ, ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ೧೯೯೮.

೧೪. ನಾಗರಾಜ ಡಿ.ಆರ್. ಶಕ್ತಿ ಶಾರದೆಯಮೇಳ, ಅಕ್ಷರ ಪ್ರಕಾಶನ ಸಾಗರ ೧೯೯೮.

೧೫. ನಾಗಭೂಷಣ ಸ್ವಾಮಿ ಒ.ಎಲ್. ವಿಮರ್ಶೆಯ ಪರಿಭಾಷೆ, ಅಂಕಿತ ಪುಸ್ತಕ ಬೆಂಗಳೂರು ೧೯೯೧.

೧೬. ಪುರುಷೋತ್ತಮ ಬಿಳಿಮತಿ ದಲಿತ ಜಗತ್ತು, ಹೊಸದಿಕ್ಕು ಪ್ರಕಾಶನ ಬೆಂಗಳೂರು ೧೯೮೯.

೧೭. ಪುಟ್ಟಯ್ಯ ಬಿ.ಎಂ. ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ ಅಪ್ರಕಟಿತ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭.

೧೮. ಭೂಮಿಗೌಡ, ಕನ್ನಡ ಕಾದಂಬರಿಗಳಲ್ಲಿ, ದಲಿತ ಜಗತ್ತು, ಚೇತನ್ ಬುಕ್ ಹೌಸ್ ಮೈಸೂರು ೨೦೦೪.

೧೯. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯.

೨೮. ಮುನಿ ವೆಂಕಟಪ್ಪ ದಲಿತ ಚಳುವಳಿ ಒಂದು ಅವಲೋಕನ ವಿಚಾರವಾದಿ ಪ್ರಕಾಶನ ಮೈಸೂರು, ೧೯೯೮.

೨೯. ಮೋಹನ ಕೃಷ್ಣ ರೈ.ಕೆ. ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ೨೦೦೪.

೩೦. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್ ಮೈಸೂರು ೨೦೦೨.

೩೧. ರಹಮತ್ ತರೀಕೆರೆ, ಮಾತು ತಲೆಯೆತ್ತುವ ಬಗೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೩೨. ರಾಮಚಂದ್ರಪ್ಪ ಬರಗೂರು, ಸಂಸ್ಕೃತಿ ಮತ್ತು ಸೃಜನಶೀಲತೆ, ಅಂಕಿತ ಪ್ರಕಾಶನ ಬೆಂಗಳೂರು ೧೯೮೭.

೩೩. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ನೆಲೆಗಳು, ಎಸ್. ಎಲ್. ಪ್ರಭಾವತಿ, ಅಂಕಿ ಪ್ರಕಾಶನ, ಬೆಂಗಳೂರು

೩೪. ಶೇಷಗಿರಿರಾವ್. ಎಲ್.ಎಸ್. ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ ಬೆಂಗಳೂರು, ೨೦೦೨.

೩೫. ಹನುಮಂತಯ್ಯ ಎಲ್. ಕಥಾಕಥನ ಬಂಡಾಯಕಥೆಗಳಲ್ಲಿ ದಲಿತ ಪ್ರಜ್ಞೆ ಸಿ.ವಿ.ಜಿ ಬೆಂಗಳೂರು, ೧೯೯೯.

೩೬. ಹೊನ್ನಯ್ಯ .ಸಿ.ಬಿ. ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಬೆಂಗಳೂರು, ೨೦೦೪.

೩೭. ಹನುಮಂತಯ್ಯ ಎಲ್. ದಲಿತ ಲೋಕದ ಬಳಗೆ, ಕರ್ನಾಟಕ ದಲಿತ ಪ್ರಕಾಶನ ಬೆಂಗಳೂರು, ೧೯೯೦.

೩೮. ಹಿರೀಮಠ ಎಸ್.ಎಸ್. ದಲಿತ ಸಂಸ್ಕೃತಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೧.

೩೯. ರಾಜಣ್ಣ ಹುಣಿಸೆ ಪಾಳ್ಯ, ಚದುರಂಗರ ಕಾದಂಬರಿಗಳ ಒಂದು ಅಧ್ಯಯನ, ಕನ್ನಡ ಮತ್ತು ಸಂಸ್ಕೃ ನಿರ್ದೇಶನಾಲಯ, ಬೆಂಗಳೂರು, ೧೯೯೨

೪೦. ಚದುರಂಗ, ವೈಶಾಖ, ಶಾರದಾ ಪುಸ್ತಕಾಲಯ, ಮೈಸೂರು, ೧೯೮೧